CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜುಲೈ ೧೫, ೨೦೦೪ (ಆಷಾಢ ೨೪, ಶಕ ವರ್ಷ ೧೯೨೬) | ಸಂಚಿಕೆ ೨೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಬಿ. ಬಸವರಾಜು, ಭಾಆಸೇ, ಇವರನ್ನು ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರ ಹುದ್ದೆಯಲ್ಲಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಕಇ 41 ಬಿಇಟಿ 2004, ದಿನಾಂಕ: 20.2.2004.
2. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 58 ಎಸ್ಎಎಸ್ 2004, ದಿನಾಂಕ: 31.1.2004.
3. ಮಹಾಲೇಖಪಾಲರ ಪತ್ರಸಂಖ್ಯೆ: ಜಿಎಂ/ಐಎಎಸ್-II/799-800, ದಿನಾಂಕ: 1.3.2004.

**ಪ್ರಸ್ತಾವನೆ:**

ಮೇಲೆ ಒಂದರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಶ್ರೀ ಬಿ. ಬಸವರಾಜು, ಭಾ.ಆ.ಸೇ. ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆ ಈ ಹುದ್ದೆಯ ಕಾರ್ಯಭಾರವನ್ನು ದಿನಾಂಕ: 31.1.2004 ರಂದು ಅಪರಾಹ್ನ ವಹಿಸಿಕೊಂಡಿದ್ದು, ಸದರಿ ದಿನಾಂಕದಿಂದ ಈ ಅಧಿಕಾರಿಯು ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರಾಗಿ ಮುಂದುವರೆಯುವವರೆಗೆ ಸೂಪರ್ ಟೈಂ ಸ್ಕೇಲ್ ವೇತನ ಶ್ರೇಣಿ ರೂ.18,400-500-22,400 ರಲ್ಲಿ ವೇತನ ಪಡೆಯಲು ಸರ್ಕಾರವು ಆದೇಶಿಸಿರುತ್ತದೆ.

ಮೇಲೆ 2 ರಲ್ಲಿ ಓದಲಾಗಿರುವ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಐಎಎಸ್ (ವೇತನ) ನಿಯಮಗಳು 1954ರ ನಿಯಮ 9ರ ಅಡಿಯಲ್ಲಿ ಹಿಂದುಳಿದ ವರ್ಗಗಳ ಆಯುಕ್ತರ ಹುದ್ದೆಯನ್ನು ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ ಈ ಹುದ್ದೆಗೆ ಸಮನಾಗಿ ಪರಿಗಣಿಸಿ ಮೇಲೆ ತಿಳಿಸಿರುವ ನಿಯಮಗಳ ಷೆಡ್ಯೂಲ್ IIIಎ ರಲ್ಲಿ ಸೇರಿದಂತೆ ಘೋಷಿಸಿರುತ್ತದೆ.

ಮೇಲೆ 3 ರಲ್ಲಿ ಓದಲಾಗಿರುವ ಪತ್ರದಲ್ಲಿ ಮಹಾಲೇಖಪಾಲರು, ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ ಹುದ್ದೆಯನ್ನು ಸೂಪರ್ ಟೈಂ ಸ್ಕೇಲ್ ವೇತನ ಶ್ರೇಣಿ ರೂ.18,400-500-22,400 ರಲ್ಲಿ ಸೃಜಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 41 ಬಿಇಟಿ 2004, ಬೆಂಗಳೂರು, ದಿನಾಂಕ: 21ನೇ ಜೂನ್ 2004**

ಐಎಎಸ್ (ವೇತನ) ನಿಯಮಗಳು 1954ರ ನಿಯಮ-9ರ ಅಡಿಯಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆ ಈ ಹುದ್ದೆಯನ್ನು ವಾಣಿಜ್ಯ ತೆರಿಗೆ ಆಯುಕ್ತರ ಹುದ್ದೆಗೆ ಸಮನಾಗಿ ಪರಿಗಣಿಸಿ ಮೇಲೆ ತಿಳಿಸಿರುವ ನಿಯಮಗಳ ಷೆಡ್ಯೂಲ್ IIIಎ ರಲ್ಲಿ ಸೇರಿಸಿರುವುದರಿಂದ ಶ್ರೀ ಬಿ. ಬಸವರಾಜು ಭಾ.ಆ.ಸೇ. ಇವರು ಹಿಂದುಳಿದ ವರ್ಗಗಳ ಇಲಾಖೆಯ ಆಯುಕ್ತರ ಹುದ್ದೆಯಲ್ಲಿ ಮುಂದುವರೆಯುವ ದಿನಾಂಕದವರೆಗೆ ಸೂಪರ್ ಟೈಂ ಸ್ಕೇಲ್ ವೇತನ ಶ್ರೇಣಿ ರೂ.18,400-500-22,400 ರಲ್ಲಿ ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ ಹುದ್ದೆಯನ್ನು ತಾತ್ಕಾಲಿಕವಾಗಿ (ಅಂದರೆ ಸದರಿ ಅಧಿಕಾರಿಯು ಹುದ್ದೆಯಲ್ಲಿ ಮುಂದುವರೆಯುವವರೆಗೆ ಮಾತ್ರ) ಸೃಜಿಸಲಾಗಿದೆ ಹಾಗೂ ಸದರಿ ಹುದ್ದೆಯಲ್ಲಿ ವೇತನ ಪಡೆಯಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಮರುಳಸಿದ್ದಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 673

## ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಪಿಡಿಎಸ್ 55 ಎಸ್‌ಎಂಸಿ 2004, ಬೆಂಗಳೂರು, ದಿನಾಂಕ: 22ನೇ ಜೂನ್ 2004**

ಸರ್ಕಾರದ ಆದೇಶ ಸಂಖ್ಯೆ: ಪಿಡಿಎಸ್ 55 ಎಸ್‌ಎಂಸಿ 2004, ದಿನಾಂಕ: 02.06.2004ರ ಪ್ರಸ್ತಾವನೆ ಭಾಗದಲ್ಲಿ ಮೊದಲನೇ ಕಂಡಿಕೆಯ 3ನೇ ಸಾಲಿನಲ್ಲಿ ಇರುವ "2000-04ನೇ ಸಾಲಿಗೆ" ಎಂಬುದಕ್ಕೆ ಬದಲಾಗಿ "2003-04ನೇ ಸಾಲಿಗೆ" ಎಂದು ಓದಿಕೊಳ್ಳತಕ್ಕದ್ದು.

ಸದರಿ ಆದೇಶದಲ್ಲಿನ ಆದೇಶ ಭಾಗದ ಮೊದಲನೇ ಕಂಡಿಕೆಯ 2ನೇ ಸಾಲಿನಲ್ಲಿರುವ "2003-04ನೇ (ದಿನಾಂಕ: 01.04.2003 ರಿಂದ 31.03.2004ರ ವರೆಗೆ) ಸಾಲಿಗೆ" ಎಂಬುದಕ್ಕೆ ಬದಲಾಗಿ "2004-05ನೇ (ದಿನಾಂಕ: 01.04.2004 ರಿಂದ 31.03.2005ರ ವರೆಗೆ) ಸಾಲಿಗೆ" ಎಂದು ಓದಿಕೊಳ್ಳತಕ್ಕದ್ದು.

ಸದರಿ ಆದೇಶದಲ್ಲಿನ ಆದೇಶ ಭಾಗದ 2ನೇ ಕಂಡಿಕೆಯ 7ನೇ ಸಾಲಿನಲ್ಲಿರುವ "2003-04ನೇ ಸಾಲಿಗೆ" ಎಂಬುದಕ್ಕೆ ಬದಲಾಗಿ "2004-05ನೇ ಸಾಲಿಗೆ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಸುಧಾಬಾಯಿ**

ಪಿ.ಆರ್. 688 ಪೀಠಾಧಿಕಾರಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ನೀರಾವರಿ ಇಲಾಖೆಯಲ್ಲಿ ಸೃಜಿಸಲಾಗಿರುವ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶವನ್ನು ಅದರ ಹುದ್ದೆಗಳೊಂದಿಗೆ ದಿನಾಂಕ: 1.4.2004 ರಿಂದ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 94, ದಿನಾಂಕ: 7.7.1994.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 13 ಸಸಿವಿ 95, ದಿನಾಂಕ: 17.7.1995.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 26 ಸಸಿವಿ 95, ದಿನಾಂಕ: 10.6.1996.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 98, ದಿನಾಂಕ: 12.5.1998.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 99, ದಿನಾಂಕ: 22.10.1999.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸಸಿವಿ 2000, ದಿನಾಂಕ: 9.5.2000.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 24 ಸಸಿವಿ 2002, ದಿನಾಂಕ: 8.5.2002.
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 52 ಸಸಿವಿ 2003, ದಿನಾಂಕ: 21.6.2003.
9. ನೀರಾವರಿ ಇಲಾಖೆಯ ಕಡತ ಸಂಖ್ಯೆ: ಜಸಂಇ 61 ಕೆಬಿಎನ್ 2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದ ಪ್ರಾರಂಭಿಕ ಕಾರ್ಯಗಳನ್ನು ನಿರ್ವಹಿಸಲು ಕರ್ನಾಟಕ ಸರ್ಕಾರದ ಸಚಿವಾಲಯದ ನೀರಾವರಿ ಇಲಾಖೆಯಲ್ಲಿ ಕೆಳಕಂಡ ಹುದ್ದೆಗಳನ್ನು ಒಳಗೊಂಡಂತೆ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶ ಒಂದನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

| | | |
|---|---|---|
| 1. | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ | 1 |
| 2. | ಅಧೀನ ಕಾರ್ಯದರ್ಶಿ | 1 |
| 3. | ಶಾಖಾಧಿಕಾರಿ | 1 |
| 4. | ಹಿರಿಯ ಸಹಾಯಕರು | 2 |
| 5. | ಸಹಾಯಕರು | 1 |
| 6. | ಕಿರಿಯ ಸಹಾಯಕರು | 1 |
| 7. | ಬೆರಳಚ್ಚುಗಾರರು | 1 |
| 8. | ಶೀಘ್ರಲಿಪಿಗಾರರು | 1 |
| 9. | ದಲಾಯತ್ | 1 |

ಮೇಲ್ಕಂಡ ಹುದ್ದೆಗಳನ್ನು ಕ್ರಮ ಸಂಖ್ಯೆ (2) ರಿಂದ (4) ರವರೆಗೆ ಓದಲಾದ ಸರ್ಕಾರದ ಆದೇಶಗಳಲ್ಲಿ ದಿನಾಂಕ: 31.3.2000 ದವರೆಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (5)ರ ಸರ್ಕಾರದ ಆದೇಶದಲ್ಲಿ ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ, ನೀರಾವರಿ ಇಲಾಖೆ (ಕೃಷ್ಣಾ ಭಾಗ್ಯ ಜಲ ನಿಗಮ ವಿಶೇಷ ಕೋಶ) ಇವರ ಆಪ್ತ ಶಾಖೆಗೆ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲಾಗಿದೆ.

| | | |
|---|---|---|
| 1. | ಶೀಘ್ರಲಿಪಿಗಾರರು | 1 |
| 2. | ಕಿರಿಯ ಸಹಾಯಕರು | 1 |
| 3. | ಗ್ರೂಪ್ 'ಡಿ' | 1 |

ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ಕ್ರಮ ಸಂಖ್ಯೆ (8) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ದಿನಾಂಕ: 1.4.2003 ರಿಂದ ದಿನಾಂಕ: 31.3.2004 ರವರೆಗೆ ಮುಂದುವರೆಸಲಾಗಿದೆ.

ಮೇಲ್ಕಂಡ ಹುದ್ದೆಗಳ ಅವಧಿಯು ದಿನಾಂಕ: 31.3.2004ಕ್ಕೆ ಅಂತ್ಯಗೊಳ್ಳಲಿರುವುದರಿಂದ ಈ ಹುದ್ದೆಗಳನ್ನು ದಿನಾಂಕ: 1.4.2004 ರಿಂದ 31.3.2005 ರವರೆಗೆ ಮುಂದುವರೆಸುವಂತೆ ಕೋರಿ ಜಲ ಸಂಪನ್ಮೂಲ ಇಲಾಖೆಯು ಮೇಲೆ ಕ್ರಮ ಸಂಖ್ಯೆ: (9) ರಲ್ಲಿ ಇರುವ ಕಡತದಲ್ಲಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಸಸಿವಿ 2004, ಬೆಂಗಳೂರು, ದಿನಾಂಕ: 7ನೇ ಜೂನ್ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಜಲ ಸಂಪನ್ಮೂಲ ಇಲಾಖೆಯ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ: 1.4.2004 ರಿಂದ 31.3.2005 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1. | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ | 1 |
| 2. | ಅಧೀನ ಕಾರ್ಯದರ್ಶಿ | 1 |
| 3. | ಶಾಖಾಧಿಕಾರಿ | 1 |
| 4. | ಹಿರಿಯ ಸಹಾಯಕರು | 2 |
| 5. | ಸಹಾಯಕರು | 1 |
| 6. | ಕಿರಿಯ ಸಹಾಯಕರು | 1 |
| 7. | ಬೆರಳಚ್ಚುಗಾರರು | 1 |
| 8. | ಶೀಘ್ರಲಿಪಿಗಾರರು | 1 |
| 9. | ದಲಾಯತ್ | 1 |

**ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿಯವರ ಆಪ್ತ ಶಾಖೆ:**

| | | |
|---|---|---|
| 1. | ಶೀಘ್ರಲಿಪಿಗಾರರು | 1 |
| 2. | ಕಿರಿಯ ಸಹಾಯಕರು | 1 |
| 3. | ಗ್ರೂಪ್ 'ಡಿ' | 1 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 692

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಬಿ.ಬಿ. ಹಿಲ್ಸ್ ವಿಂಡ್ ಫಾರ್ಮ್ ಡೆವಲಪ್‌ಮೆಂಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾದ 100 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನಾ ಸಾಮರ್ಥ್ಯವನ್ನು 93 ಮೆಗಾ ವ್ಯಾಟ್‌ಗೆ ಕಡಿತಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಡಿಇ 83 ಎನ್‌ಸಿಇ 2001, ದಿನಾಂಕ: 19.9.2001.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಬಿಬಿಹೆಚ್/2004/908, ದಿನಾಂಕ: 22/24.5.2004.

**ಪ್ರಸ್ತಾವನೆ:**

ಮೆಸರ್ಸ್ ಬಿ.ಬಿ. ಹಿಲ್ಸ್ ವಿಂಡ್ ಫಾರ್ಮ್ ಡೆವಲಪ್‌ಮೆಂಟ್ ಪ್ರೈವೇಟ್ ಲಿಮಿಟೆಡ್, ಚೆನ್ನೈ ಈ ಕಂಪೆನಿಗೆ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಚಿಕ್ಕಮಗಳೂರು ಜಿಲ್ಲೆಯ, ಬಿ.ಬಿ. ಹಿಲ್ಸ್ ಪ್ರದೇಶದಲ್ಲಿ 100 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಹಂಚಿಕೆ ಆಗಿರುವ ಸ್ಥಳದಲ್ಲಿ ತಾಂತ್ರಿಕ ಮತ್ತು ಭೌಗೋಳಿಕವಾಗಿ ಒಟ್ಟಾರೆ 93 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಘಟಕ ಸ್ಥಾಪಿಸಲು ಮಾತ್ರ ಸೂಕ್ತವಾಗಿದೆಯೆಂದೂ ಈ ದಿಸೆಯಲ್ಲಿ ಹಂಚಿಕೆಯಾಗಿರುವ ಸಾಮರ್ಥ್ಯವನ್ನು 93 ಮೆಗಾ ವ್ಯಾಟ್‌ಗೆ ಕಡಿತಗೊಳಿಸಬೇಕೆಂದು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲೆ ಓದಲಾದ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 188 ಎನ್‌ಸಿಇ 2004, ಬೆಂಗಳೂರು, ದಿನಾಂಕ: 22ನೇ ಜೂನ್ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಮೆಸರ್ಸ್ ಬಿ.ಬಿ. ಹಿಲ್ಸ್ ವಿಂಡ್ ಫಾರ್ಮ್ ಡೆವಲಪ್‌ಮೆಂಟ್ ಪ್ರೈವೇಟ್ ಲಿಮಿಟೆಡ್, ಚೆನ್ನೈ ಈ ಕಂಪೆನಿಗೆ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾದ ಪವನ

ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 100 ಮೆಗಾ ವ್ಯಾಟ್‌ನಿಂದ 93 ಮೆಗಾ ವ್ಯಾಟ್‌ಗೆ ಕಡಿತಗೊಳಿಸಿ ಅನುಷ್ಠಾನಗೊಳಿಸಬೇಕೆಂದು ಸೂಚಿಸಲಾಗಿದೆ. ಸದರಿ ಕಂಪೆನಿಯಿಂದ ಈ ಸ್ಥಳದಲ್ಲಿ ಇನ್ನ್ಯಾವದೆ ಹೆಚ್ಚುವರಿ ಸಾಮರ್ಥ್ಯದ ಪ್ರಸ್ತಾವನೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 693 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ENERGY SECRETARIAT

**Subject:** Extension of time limit to implement Mini Hydel Plant at Narayanapur RBC (54.33 and 54.91 K.M.) to M/s Narayanpur Power Company Private Limited - orders relating to.

**Read:**
1. Government Order No. DE 125 NCE 96 (13), dated: 10.6.1997.
2. Government Order No. DE 54 NCE 97, dated: 20.10.1999.
3. Government Order No. DE 54 NCE 97, dated: 9.4.2002.
4. Government letter No. DE 54 NCE 97, dated: 28.5.2002.
5. Letter No: NPCPL F.G.I. 93, 2004-2005, dated: 17.6.2004.

**PREAMBLE** :

In the Government order read at (1) above permission had been accorded to M/s Narayanapur Power Company Private Limited, to implement 12 M.W. Mini Hydel Power Project at Narayanapur R.B.C. (54.33 and 54.91 K.M.) in Raichur District.

(2) In the Government order read at (2) and (3) above extension of time had been granted for implementation of the project.

(3) In the Government letter read at (4) above, approval had been accorded for the development of Narayanapur Right Bank Canal Mini Hydel Power Project in 2 stages ie, 1x6 M.W. in 1st stage and 1x6 M.W. subsequently.

(4) In the letter read at (5) above, the Managing Director, M/s Narayanapur Power Company Private Limited has requested to extend the time limit for commissioning the unit-I till 31.8.2005 and unit-II till 31.8.2008.

(5) Hence, the following order.

**Government Order No: DE 198 NCE 2004, Bangalore, Dated: 22nd June 2004.**

(6) In the circumstances explained in the preamble, Government are pleased to grant extension of time to M/s Narayanapur Power Company Private Limited for commissioning the Mini Hydel Power Project at Narayanapur Right Bank Canal (54.33 and 54.91 K.M.) in Raichur District, as detailed below:

Unit-I (6 M.W.) up to 31.8.2005
Unit-II (6 M.W.) up to 31.8.2008

(7) the other terms and conditions in the Government Order read at (1) above are IPSOFACTO applicable.

By Order and in the Name of the Governor of Karnataka,

**K.L. JAYARAM**

PR- 694 Under Secretary to Government, Energy Department.

**Subject:** Change of name of the company as "M/s Chikmagalur Energy Projects Private Limited" - order relating to.

**Read:**
1. Government Order No: DE 92 NCE 2001, dated: 19.11.2001.
2. Letter No: KRED/08/CEPL 2004/964, dated: 2.6.2004 received from the Managing Director, Karnataka Renewable Energy Development Limited, Bangalore.

**PREAMBLE** :

In the Government order read at (1) above, Government had allotted 50 M.W. capacity wind power project at Sunnadahalli and Hoovinahalli in Chikmagalur District to M/s Millenium Exports Private Limited.

(2) In the letter read at (2) above the Managing Director, Karnataka Renewable Energy Development Limited, Bangalore, has recommended to change the name of the company from Millenium Exports Private Limited to "M/s Chikmagalur Energy Projects Private Limited".

(3) Hence, the following order

**Government Order No: DE 9 NCE 2004, Bangalore, Dated: 21st June 2004.**

(4) In the circumstances explained in the preamble and after careful consideration Government are pleased to permit change of name of the company from M/s Millenium Exports, Private Limited, to

**"M/s Chikmagalur Energy Projects Private Limited"** to implement 50 M.W. wind power project at Sunnadahalli and Hoovinahalli in Chikmagalur District.

By Order and in the Name of the Governor of Karnataka,

**K.L. JAYARAM**

PR-695 Under Secretary to Government, Energy Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಅಬ್ದುಲ್ ಖಯ್ಯುಂ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಕ್ರಮಾಂಕ: ಸಿಆಸುಇ 60 ಎಸ್‌ಇಎನ್ 2002, ದಿನಾಂಕ: 21.6.2002.

2. ಶ್ರೀ ಅಬ್ದುಲ್ ಖಯ್ಯುಂ ರವರ ದಿನಾಂಕ: 2.7.2002ರ ಉತ್ತರ.

**ಪ್ರಸ್ತಾವನೆ:**

ಶ್ರೀ ಅಬ್ದುಲ್ ಖಯ್ಯುಂ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರು ಹೊಸಕೋಟೆ ತಾಲ್ಲೂಕು ತಹಶೀಲ್ದಾರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಹೊಸಕೋಟೆ ತಾಲ್ಲೂಕಿನ ಅನುಗೊಂಡನಹಳ್ಳಿ ಹೋಬಳಿ, ನಾಗನಾಯಕನಕೋಟೆ ಸರ್ವೆ ನಂಬರ್ 75:1 ರಲ್ಲಿ 0.39 ಗುಂಟೆ ಜಮೀನು ಬಾಬ್ತು ಪಹಣಿ ಕಲಂ 12(2) ರಲ್ಲಿ ಜಮೀನಿನ ಖಾತೆಯ ಶ್ರೀ ಗೋಪಣ್ಣ ಎಂಬುವವರ ಹೆಸರಿನಲ್ಲಿದ್ದರೂ, ಖಾತೆದಾರರ ವಿರುದ್ಧವಾಗಿ ಅನಧಿಕೃತ ವ್ಯಕ್ತಿ ಶ್ರೀ ಹೆಚ್. ವೆಂಕಟರಾಮಯ್ಯ ನವರ ಹೆಸರನ್ನು ನಮೂದು ಮಾಡಲು ಆದೇಶ ಮಾಡಿ ಕರ್ನಾಟಕ ಭೂ ಕಂದಾಯ ಕಾಯಿದೆ 1964ರ ಕಲಂ 127ನ್ನು ಉಲ್ಲಂಘಿಸಿ ಕರ್ತವ್ಯ ಲೋಪವೆಸಗಿದ ಆರೋಪಕ್ಕಾಗಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 21.6.2002ರ ನೋಟೀಸ್ ಜಾರಿ ಮಾಡುವ ಮೂಲಕ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸ್‌ಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 2.7.2002ರ ಉತ್ತರ ಸಲ್ಲಿಸಿದ ಆರೋಪಿಯು ತಮ್ಮ ಮೇಲಿನ ಆರೋಪವನ್ನು ಅಲ್ಲಗಳೆದಿದ್ದಾರೆ. ಶ್ರೀಯುತರ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಅದು ಮನಗಾಣಿಸುವ ರೀತಿಯಲ್ಲಿಲ್ಲದ ಕಾರಣ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 60 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 8ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಅಬ್ದುಲ್ ಖಯ್ಯುಂ ಕೆ.ಎ.ಎಸ್., ಅಧಿಕಾರಿ ವಿರುದ್ಧ ಮೇಲೆ ಹೇಳಲಾದ ಆರೋಪಗಳ ಕುರಿತು ವಿಚಾರಣೆ ಮಾಡುವ ಸಲುವಾಗಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಗಿಸಿ ವಿಚಾರಣಾ ವರದಿಯನ್ನು ಸಲ್ಲಿಸುವುದು, ಈ ವಿಚಾರಣೆಗಾಗಿ ಅವರು 5000 ರೂಪಾಯಿಗಳ ಗೌರವಧನ ಹಾಗೂ 1000 ರೂಪಾಯಿಗಳ ವಾಹನಭತ್ಯೆಗಳನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು, ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿ, ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರ - ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು ಒದಗಿಸಲು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 696 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ:** ನಿರ್ಗಮಿಸುವ ಮುಖ್ಯ ಮಂತ್ರಿಗಳಿಗೆ ಸಿಬ್ಬಂದಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 126 ಶಿಸನೇ 2000ದ ದಿನಾಂಕ: 19.09.2000.

2. ಮಾಜಿ ಮುಖ್ಯ ಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣರವರ ಟಿಪ್ಪಣಿ ಸಂಖ್ಯೆ: ಸಿಎಂ:ಎಎನ್:208:ಒಎಸ್‌ಡಿ: 2004, ದಿನಾಂಕ: 26.05.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 126 ಶಿಸನೇ 2000, ದಿನಾಂಕ: 19.09.2000 ದಲ್ಲಿ ತಕ್ಷಣವೇ ಪದವಿಯನ್ನು ತ್ಯಜಿಸಿದ ಮುಖ್ಯ ಮಂತ್ರಿಗಳಿಗೆ ನೂತನವಾಗಿ ಪದಾರೋಹಣಾ ಮಾಡಿದ ಮುಖ್ಯ ಮಂತ್ರಿಗಳ ಪದವಿಯ ಅವಧಿ ಇರುವವರೆಗೆ ಅಥವಾ ಮೂರು ವರ್ಷಗಳ ಅವಧಿಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗ್ರೂಪ್ 'ಸಿ' ವೃಂದದ ಆಪ್ತ ಸಹಾಯಕರ 1 ಹುದ್ದೆ (ವೇತನ ಶ್ರೇಣಿ ರಹಿತ) ಹಾಗೂ 4ನೇ ದರ್ಜೆ ('ಡಿ' ವೃಂದ ನೌಕರರ 1 ಹುದ್ದೆಯನ್ನು ಸೃಜಿಸಿ ಆದೇಶಿಸಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಮಾಜಿ ಮುಖ್ಯ ಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣರವರು ಪದವಿ ತ್ಯಜಿಸಿದ ಮುಖ್ಯ ಮಂತ್ರಿಗಳ ಕೆಲಸ ಕಾರ್ಯಗಳ ಒತ್ತಡವನ್ನು ಪರಿಗಣಿಸಿ ಈ ಕೆಳಕಂಡಂತೆ ಆಪ್ತ ಸಿಬ್ಬಂದಿ ವರ್ಗವನ್ನು ನೀಡುವಂತೆ ಕೋರಿರುವರು.

| | | |
|---|---|---|
| 1. | ಗ್ರೂಪ್-ಸಿ ವೃಂದದ ಆಪ್ತ ಸಹಾಯಕರು (ವೇತನ ಶ್ರೇಣಿ ರಹಿತ) | 2 ಹುದ್ದೆ |
| 2. | 4ನೇ ದರ್ಜೆ (ಡಿ-ವೃಂದ) ನೌಕರರು | 2 ಹುದ್ದೆ |
| 3. | ಅಂಗರಕ್ಷಕರು (ಗನ್ ಮ್ಯಾನ್) | 3 ಹುದ್ದೆ |

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಪರಿಷ್ಕೃತ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 67 ಶಿಸನೇ 2004, ಬೆಂಗಳೂರು, ದಿನಾಂಕ: 8ನೇ ಜೂನ್ 2004**

ಸೂಕ್ತ ಪರಿಶೀಲನೆಯ ತರುವಾಯ ಹಾಗೂ ದಿನಾಂಕ: 19.09.2000ದ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 126 ಶಿಸನೇ 2000 ವನ್ನು ಪರಿಷ್ಕರಿಸಿ, ತಕ್ಷಣವೇ ಪದವಿಯನ್ನು ತ್ಯಜಿಸಿದ ಮುಖ್ಯ ಮಂತ್ರಿಗಳಿಗೆ, ನೂತನವಾಗಿ ಪದಾರೋಹಣ ಮಾಡಿದ ಮುಖ್ಯ ಮಂತ್ರಿಗಳ ಪದವಿಯನ್ನು ಅವಧಿ ಇರುವವರೆಗೆ ಅಥವಾ ಮೂರು ವರ್ಷದ ಅವಧಿಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಈ ಕೆಳಕಂಡ ಸಿಬ್ಬಂದಿಯನ್ನು ಸೃಜಿಸಲು ಸರ್ಕಾರವು ಮಂಜೂರಾತಿ ನೀಡಿದೆ.

| | | |
|---|---|---|
| 1. | ಗ್ರೂಪ್-ಸಿ ವೃಂದದ ಆಪ್ತ ಸಹಾಯಕರು (ವೇತನ ಶ್ರೇಣಿ ರಹಿತ) | 2 ಹುದ್ದೆ |
| 2. | 4ನೇ ದರ್ಜೆ (ಡಿ-ವೃಂದ) ನೌಕರರು | 2 ಹುದ್ದೆ |
| 3. | ಅಂಗರಕ್ಷಕರು (ಗನ್ ಮ್ಯಾನ್) | 3 ಹುದ್ದೆ |

ಈ ಸಿಬ್ಬಂದಿ ವರ್ಗದ ವೇತನ ಭತ್ಯೆ ಇತ್ಯಾದಿ ವೆಚ್ಚಗಳನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "2052-ಸಚಿವಾಲಯ-ಸಾಮಾನ್ಯ ಸೇವೆಗಳು-090-ಸಚಿವಾಲಯ-1-ಕೆಜಿಎಸ್-1-ಸಂಬಳಗಳು-ನೌಕರರು : ಅಧಿಕಾರಿಗಳು" ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 952 ವೆಚ್ಚ-5 2004, ದಿನಾಂಕ: 31.05.2004 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ.ಜೆ.ಎ ಆಶೀರ್ವಾದಂ**

ಪಿ.ಆರ್. 697

ಸರ್ಕಾರದ ಅಧೀನ ಕಾರ್ಯದರ್ಶಿ-2,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ವಿಷಯ:** ಶ್ರೀ ಚಿಕ್ಕಪ್ಪ ಕೆ. ತಳವಾರ್, ಕಿರಿಯ ಸಹಾಯಕ, ಕರ್ನಾಟಕ ವಿಧಾನ ಪರಿಷತ್ತು ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ:**
1. ಶ್ರೀ ಚಿಕ್ಕಪ್ಪ ಕೆ. ತಳವಾರ್, ಕಿರಿಯ ಸಹಾಯಕ, ಇವರ ಅನಧಿಕೃತ ಗೈರು ಹಾಜರಿಯ ಬಗ್ಗೆ ದಂಡನೆ ವಿಧಿಸಿರುವ ಆದೇಶದ ಸಂಖ್ಯೆ: ಕವಿಪ:ಅ-1:83:ರಜೆ:2003, ದಿನಾಂಕ: 09.10.2003.
2. ಶ್ರೀ ಚಿಕ್ಕಪ್ಪ ಕೆ. ತಳವಾರ್, ಕಿರಿಯ ಸಹಾಯಕ, ಇವರಿಗೆ ಸಚಿವಾಲಯದಿಂದ ನೀಡಲಾದ ನೋಟೀಸ್ ಸಂಖ್ಯೆ: ಕವಿಪ:ಅ-1:83:ಇವಿ:2004, ದಿನಾಂಕ: 16.01.2004.
3. ಶ್ರೀ ಚಿಕ್ಕಪ್ಪ ಕೆ. ತಳವಾರ್, ಕಿರಿಯ ಸಹಾಯಕ, ಇವರ ಹಾಜರಾತಿ ಬಗ್ಗೆ ದಿನಪತ್ರಿಕೆಯಲ್ಲಿ ಪ್ರಕಟಿಸಿದ ತಿಳುವಳಿಕೆ ಪತ್ರ ದಿನಾಂಕ: 17.04.2004.
4. ಸುತ್ತೋಲೆ ಸಂಖ್ಯೆ: ಸಿಆಸುಇ:18:ನೇಇವಿ:2001, ದಿನಾಂಕ: 14.09.2001.

**ಪ್ರಸ್ತಾವನೆ:**

ಓದಲಾಗಿರುವ ಕ್ರಮ ಸಂಖ್ಯೆ: (1) ರಲ್ಲಿ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಕಿರಿಯ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಚಿಕ್ಕಪ್ಪ ಕೆ. ತಳವಾರ್ ಇವರು ಕಛೇರಿಗೆ ಅನಧಿಕೃತ ಗೈರು ಹಾಜರಾಗಿರುವುದಕ್ಕೆ ಸಂಬಂಧಿಸಿದಂತೆ ನಡೆದ ಇಲಾಖಾ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರವು ಪರಿಶೀಲಿಸಿ ಈ ಪ್ರಕರಣವನ್ನು ಸಹಾನುಭೂತಿಯ ಮನೋಭಾವದಿಂದ ಇನ್ನು ಮುಂದೆ ಅನಧಿಕೃತ ಗೈರು ಹಾಜರಾಗುವ ಪ್ರವೃತ್ತಿಯನ್ನು ಮುಂದುವರಿಸದಂತೆ ಅಂತಿಮ ಎಚ್ಚರಿಕೆಯೊಂದಿಗೆ ಸದರಿಯವರ ಗೈರು ಹಾಜರಿಯ ಅವಧಿಯಾದ ದಿನಾಂಕ: 20.03.2003 ರಿಂದ 09.07.2003 ರವರೆಗೆ, ದಿನಾಂಕ: 09.08.2003 ರಿಂದ 17.08.2003 ಹಾಗೂ 20.08.2003 ರಿಂದ 07.09.2003 ರವರೆಗೆ ವೇತನ ರಜೆಯನ್ನಾಗಿ ಪರಿಗಣಿಸಿ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ರಹಿತವಾಗಿ ಕಡಿತಗೊಳಿಸಲು ಆದೇಶಿಸಿರುತ್ತದೆ.

ಓದಲಾಗಿರುವ ಕ್ರಮ ಸಂಖ್ಯೆ (2) ರಲ್ಲಿ ದಿನಾಂಕ: 17.10.2003 ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರು ಹಾಜರಾಗಿರುವುದಕ್ಕೆ ಸಂಬಂಧಿಸಿದಂತೆ, 1957ನೇ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ಮತ್ತು 11(ಎ) ಪ್ರಕಾರ ಹಾಗೂ 2003ನೇ ಸಾಲಿನ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ ನೇಮಕಾತಿ ಹಾಗೂ ಸೇವಾ ಷರತ್ತುಗಳ ನಿಯಮಾವಳಿಯನುಸಾರ ನೋಟೀಸು ಜಾರಿ ಮಾಡಿ, ನೋಟೀಸು ತಲುಪಿದ 15 ದಿನಗಳ ಒಳಗಾಗಿ ನಿಮ್ಮ ನಡತೆಯನ್ನು ಸಮರ್ಥಿಸಿಕೊಳ್ಳುವ ಹೇಳಿಕೆ ಹಾಗೂ ನಿಮ್ಮ ಪರವಾಗಿ ಯಾವುದಾದರೂ ಸಾಕ್ಷ್ಯಾಧಾರಗಳು ಇದ್ದರೆ ಕಛೇರಿಗೆ ತಿಳಿಸಬೇಕೆಂದು ಹಾಗೂ ಲಿಖಿತ ಸಮರ್ಥನೆ ಬಾರದಿದ್ದಲ್ಲಿ ಈ ವಿಷಯದಲ್ಲಿ ಹೇಳಿಕೊಳ್ಳುವುದೇನೂ ಇಲ್ಲವೆಂದು ಭಾವಿಸಿ ನಿಯಮಾನುಸಾರ ಮುಂದಿನ ಕ್ರಮ ಕೈಗೊಳ್ಳಲಾಗುವುದೆಂದು ತಿಳಿಸಿ ರವಾನಿಸಿದ್ದ ನೋಟೀಸ್‌ನ್ನು ಸದರಿಯವರ ಕುಟುಂಬದವರು ಸ್ವೀಕರಿಸಿದ್ದರೂ ಇವರು ಇದುವರೆವಿಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ಓದಲಾಗಿರುವ ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ಕ್ರಮ ಸಂಖ್ಯೆ: 2ಕ್ಕೆ ಲಿಖಿತ ಸಮರ್ಥನೆ ಇಲ್ಲದೆ ಹಾಗೂ ಕಛೇರಿಗೆ ಅನಧಿಕೃತ ಗೈರುಹಾಜರಾತಿಯನ್ನು ಮುಂದುವರಿಸಿದ ಕಾರಣ ದಿನಾಂಕ: 17.04.2004 ರಂದು ಕೂಡಲೇ ಕರ್ತವ್ಯದ ಮೇಲೆ ಹಾಜರಾಗುವಂತೆ, ಹಾಜರಾಗದಿದ್ದಲ್ಲಿ ನಿಯಮಾನುಸಾರ ಶಿಸ್ತಿನ ಕ್ರಮ ಜರುಗಿಸಲಾಗುವುದೆಂದು ತಿಳಿಸಿ ಸಂಯುಕ್ತ ಕರ್ನಾಟಕ ಹಾಗೂ ಕನ್ನಡಪ್ರಭ ದಿನಪತ್ರಿಕೆಗಳಲ್ಲಿ ಪ್ರಕಟಿಸಲಾಗಿತ್ತು. ಆದರೂ ಸಹ ಕಛೇರಿಗೆ ಹಾಜರಾಗಿರುವುದಿಲ್ಲ.

ಓದಲಾಗಿರುವ ಕ್ರಮ ಸಂಖ್ಯೆ (4) ರಲ್ಲಿ ಸರ್ಕಾರಿ ನೌಕರನ ವಿರುದ್ಧ ವಿಚಾರಣೆ ನಡೆಸಿ ಸಾಬೀತಾದಂತಹ ಆರೋಪಗಳಿಗನುಗುಣವಾಗಿ ನಾಲ್ಕು ತಿಂಗಳು ಮೀರಿದ ಅನಧಿಕೃತ ಗೈರು ಹಾಜರಿಯಾದಲ್ಲಿ - ಸೇವೆಯಿಂದ ತೆಗೆದುಹಾಕುವುದಾಗಿ ಸೂಚಿಸಿದೆ. 1957ನೇ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14 ರಲ್ಲಿ ನೌಕರನು ತಲೆಮರೆಸಿ ಕೊಂಡಿದ್ದರೆ ಅಥವಾ ಆತನನ್ನು ಸಂಪರ್ಕಿಸುವುದು ಸಾಧ್ಯವಾಗದೆಂದು ಇದಕ್ಕೆ ಸಂಬಂಧಿಸಿದ ಕಾರಣವನ್ನು ಲಿಖಿತ ಮೂಲಕ ದಾಖಲು ಮಾಡಿದರೆ ಅಂಥವರ ವಿರುದ್ಧ ವಿಚಾರಣೆ ಮಾಡದೆ ನಿಯಮ 8(vii) ಮತ್ತು (viii)ರ ಪ್ರಕಾರ ಸೇವೆಯಿಂದ ತೆಗೆದುಹಾಕಲು ನೇಮಕಾತಿ ಪ್ರಾಧಿಕಾರಕ್ಕೆ ಅಧಿಕಾರವಿರುತ್ತದೆ.

ಶಿಸ್ತು ಪ್ರಾಧಿಕಾರವು ಈ ಪ್ರಕರಣವನ್ನು ಸಮಗ್ರವಾಗಿ ಪರಿಶೀಲಿಸಿ ಶ್ರೀ ಚಿಕ್ಕಪ್ಪ ಕೆ. ತಳವಾರ್, ಕಿರಿಯ ಸಹಾಯಕ ಇವರು ನಿರಂತರವಾಗಿ ಗೈರು ಹಾಜರಾಗಿರುವುದರಿಂದ ಹಾಗೂ ಇದಕ್ಕೆ ಸಂಬಂಧಪಟ್ಟ ಎಲ್ಲಾ ದಾಖಲಾತಿಗಳಿರುವುದರಿಂದ ಇವರನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶವನ್ನು ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕವಿಕ:ಅ-1:09:ಸೇವಜಾ:2004, ಬೆಂಗಳೂರು, ದಿನಾಂಕ: 21ನೇ ಜೂನ್ 2004**

ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 108ನ್ನು ಓದಿಕೊಂಡಂತೆ, 1957ನೇ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14 ರಲ್ಲಿ ತಿಳಿಸಿರುವಂತೆ, ದಿನಾಂಕ: 14.09.2001ರ ಸುತ್ತೋಲೆ ಸಂಖ್ಯೆ: ಸಿಆಸುಇ:18:ನೇಇವಿ:2001ರ ರೀತ್ಯಾ ಹಾಗೂ ಸಿಸಿಎ ನಿಯಮ 8(viii)ರ ಪ್ರಕಾರ, 2003ನೇ ಸಾಲಿನ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 8ರ ಅಧಿಕಾರವನ್ನು ಚಲಾಯಿಸಿ ಶ್ರೀ ಚಿಕ್ಕಪ್ಪ ಕೆ. ತಳವಾರ್, ಕಿರಿಯ ಸಹಾಯಕ, ಕರ್ನಾಟಕ ವಿಧಾನ ಪರಿಷತ್ತು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಸಭಾಪತಿಯವರ ಆದೇಶಾನುಸಾರ,

**ಕೆ. ಜಯಶಂಕರಮೂರ್ತಿ**

ಪಿ.ಆರ್. 699 ಕಾರ್ಯದರ್ಶಿ (ಪ್ರ), ಕರ್ನಾಟಕ ವಿಧಾನ ಪರಿಷತ್ತು.

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ:** ಹಾಸನ ಜಿಲ್ಲೆಯಲ್ಲಿ ಅಕ್ಕಿ ಹಗರಣದಲ್ಲಿ ಭಾಗಿಯಾಗಿರುವ ಸಂಬಂಧಪಟ್ಟ ಕೃಷಿ ಅಧಿಕಾರಿಗಳನ್ನು ಸೇವೆಯಿಂದ ಅಮಾನತ್ತುಗೊಳಿಸುವ ಆದೇಶ.

**ಓದಲಾಗಿದೆ:** 1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾಪಂಚಾಯತ್, ಹಾಸನ ಇ ವರ ಪತ್ರ ಸಂಖ್ಯೆ:ಜಿಪಂಹಾ: ಆಸಿ(7)140:2004-05 ದಿನಾಂಕ:25-06-2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾಸನರವರು ಪೋಲೀಸ್ ಉಪ ಅಧೀಕ್ಷಕರು, ವಂಚನೆ ತನಿಖಾದಳ, ಸಿಓಡಿ, ಬೆಂಗಳೂರು, (ಮೊಕ್ಕಾಂ ಹಾಸನ) ಇ ವರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾ ದಿನಾಂಕ: 24-06-2004 ರಂದು ಅಪರಾಹ್ನ 3-00 ಗಂಟೆಯ ಸಮಯದಲ್ಲಿ ಮಂಗಳೂರು ಗ್ರಾಮಾಂತರ ಪೋಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:153:04 ಕಲಂ 406, 409, 420, 120(ಬಿ) 411, 414, 465, 468, 471 ಮತ್ತು 477(ಎ) ರ ಭಾರತೀಯ ದಂಡ ಸಂಹಿತೆ ಪ್ರಕರಣದಲ್ಲಿ ಈ ಕೆಳಕಂಡ ಕೃಷಿ ಇ ಲಾಖೆಯ ಅಧಿಕಾರಿಗಳನ್ನು ಆರೋಪಿಗಳೆಂದು ದಸ್ತಗಿರಿ ಮಾಡಿದ್ದು, ನ್ಯಾಯಾಲಯದಲ್ಲಿ ಹಾಜರುಪಡಿಸುವುದಾಗಿ ಉಪ ಅಧೀಕ್ಷಕರು, ಸಿಓಡಿ, ಹಾಸನ ಇ ವರು ತಿಳಿಸಿದ್ದಾರೆಂದು ವರದಿ ನೀಡುತ್ತಾ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ವಹಿಸಬೇಕಾದ ಕ್ರಮದ ಬಗ್ಗೆ ಸರ್ಕಾರದ ನಿರ್ದೇಶನ ಕೋರಿದ್ದಾರೆ.

**ಶ್ರೀಯುತರು:**

1) ಕೆ.ವಿ.ಸುಬ್ರಹ್ಮಣ್ಯ, ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಇ ಲಾಖೆ, ಸಕಲೇಶಪುರ.
2) ಹೆಚ್.ಪಿ.ಅಶೋಕ್ ಕುಮಾರ್, ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಇ ಲಾಖೆ, ಆಲೂರು.
3) ಕೆ.ಎಂ.ಶೇಷಣ್ಣ, ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಇ ಲಾಖೆ, ಚನ್ನರಾಯಪಟ್ಟಣ.
4) ಕೆ.ಆರ್.ಮಲ್ಲೇಶ ಗೌಡ, ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಇ ಲಾಖೆ, ಹೊಳೆನರಸೀಪುರ.
5) ಡಿ.ಎನ್.ವಿಶ್ವನಾಥ್, ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಇ ಲಾಖೆ, ಬೇಲೂರು.
6) ಟಿ.ಕೃಷ್ಣಕುಮಾರ್, ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಇ ಲಾಖೆ, ಅರಕಲಗೂಡು.

ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಮೇಲ್ಕಂಡ ಕೃಷಿ ಇ ಲಾಖೆ ಅಧಿಕಾರಿಗಳನ್ನು ಮಂಗಳೂರು ಗ್ರಾಮಾಂತರ ಪೋಲೀಸ್ ಠಾಣೆ ಸಂ:153/04, ಕಲಂ 406, 409, 420, 120(ಬಿ) 411, 414, 465, 468, 471 ಮತ್ತು 477(ಎ) ರ ಭಾರತೀಯ ದಂಡ ಸಂಹಿತೆ ಪ್ರಕರಣದಲ್ಲಿ ಆರೋಪಗಳೆಂದು ದಿನಾಂಕ: 24-06-2004 ರಂದು 3-00 ಗಂಟೆಗೆ ಬಂಧಿಸಿದ್ದು, ನ್ಯಾಯಾಧೀಶರ ಮುಂದೆ ಹಾಜರುಪಡಿಸಲಾಗುವುದೆಂದು ತಿಳಿಸಿರುವುದರಿಂದ, ಈ ಮೇಲ್ಕಂಡ ಆಪಾದಿತರು ಗಂಭೀರ ಸ್ವರೂಪದ ಕ್ರಿಮಿನಲ್ ಆಪಾದನೆಯಲ್ಲಿ ಭಾಗಿಯಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ

(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10 ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಈ ಅಧಿಕಾರಿಗಳ ವಿರುದ್ಧ ಕ್ರಿಮಿನಲ್ ಮೊಕದ್ದಮೆ:ಇ ಲಾಖಾ ವಿಚಾರಣೆ ಬಾಕಿ ಇ ರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂ: ಕೃತೋಇ 32 ಕೃಪವಿ 2004, ಬೆಂಗಳೂರು,ದಿನಾಂಕ: 28ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10 ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅಧಿಕಾರಿಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಇ ವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ:ಇ ಲಾಖಾ ವಿಚಾರಣೆ ಬಾಕಿ ಇ ರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

**ಶ್ರೀಯುತರು:**

1) ಕೆ.ವಿ.ಸುಬ್ರಹ್ಮಣ್ಯ, ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಇ ಲಾಖೆ, ಸಕಲೇಶಪುರ.
2) ಹೆಚ್.ಪಿ.ಅಶೋಕ್ ಕುಮಾರ್, ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಇ ಲಾಖೆ, ಆಲೂರು.
3) ಕೆ.ಎಂ.ಶೇಷಣ್ಣ, ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಇ ಲಾಖೆ, ಚನ್ನರಾಯಪಟ್ಟಣ.
4) ಕೆ.ಆರ್.ಮಲ್ಲೇಶ ಗೌಡ, ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಇ ಲಾಖೆ, ಹೊಳೆನರಸೀಪುರ.
5) ಡಿ.ಎನ್.ವಿಶ್ವನಾಥ್, ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಇ ಲಾಖೆ, ಬೇಲೂರು.
6) ಟಿ.ಕೃಷ್ಣಕುಮಾರ್, ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಇ ಲಾಖೆ, ಅರಕಲಗೂಡು.

ಅಮಾನತ್ತಿನ ಅವಧಿಯಲ್ಲಿ ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ, ಕೇಂದ್ರ ಸ್ಥಾನದಲ್ಲಿರಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಎಂ.ಎಸ್.ದೇಸಾಯಿ

ಪಿ.ಆರ್. 674

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇ ಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಎಸ್.ಬಿ.ಜವಳಗಿ, ಸಹಾಯಕ ನಿರ್ದೇಶಕರು (ನಿವೃತ್ತ) ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂ.ಎಸ್‌ಡಬ್ಲ್ಯೂಎಲ್ 57 ಎಸ್‌ಜೆಡಿ 80 ದಿನಾಂಕ: 20–8–83
2) ಸರ್ಕಾರಿ ಆದೇಶ ಸಂ.ಎಸ್‌ಡಬ್ಲ್ಯೂಎಲ್ 57 ಎಸ್‌ಜೆಡಿ 80 ದಿನಾಂಕ: 24–2–92
3) ವಿಚಾರಣಾ ವರದಿ ಸಂಖ್ಯೆ: LOK /ARE-3 /ENQ. 40/92 ದಿನಾಂಕ: 11–7–1997 ಮತ್ತು ದಿನಾಂಕ: 4.3.2003
4) ಕಾರಣ ಕೇಳುವ ನೋಟೀಸ್ ಪತ್ರದ ಸಂಖ್ಯೆ: 57 ಎಸ್‌ಜೆಡಿ 80 ದಿನಾಂಕ: 2–9–2003
5) ಕಾರಣ ಕೇಳುವ ನೋಟೀಸ್‌ಗೆ ಉತ್ತರ ನೀಡಿದ ದಿನಾಂಕ: 28–11–2003
6) ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪತ್ರ ದಿನಾಂಕ: 24–2–2004.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರ.ಸಂ. (1) ಮತ್ತು (2) ರ ದಿನಾಂಕ: 20–8–83 ಮತ್ತು ದಿನಾಂಕ: 24–2–92ರ ಆದೇಶಗಳಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿಯಾದ, ಶ್ರೀ ಎಸ್.ಬಿ.ಜವಳಗಿ, ಹಿಂದಿನ ಪರಿವೀಕ್ಷಣಾಧಿಕಾರಿ, ಇವರು ಸ್ವೀಕಾರ ಕೇಂದ್ರ, ಶಿವಮೊಗ್ಗದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಲೆಕ್ಕ ಪತ್ರ ನಿರ್ವಹಣೆ ಲೋಪಗಳ ಕುರಿತಂತೆ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ ಸಿಸಿಎ ನಿಯಮಾವಳಿಗಳ 1957ರ ನಿಯಮ 14 ರನ್ವಯ ವಿವರವಾದ ತನಿಖೆ ಮತ್ತು ವಿಚಾರಣೆಯನ್ನು ನಡೆಸಿ ವರದಿಯನ್ನು ಒಪ್ಪಿಸುವಂತೆ ಕರ್ನಾಟಕ ಲೋಕಾಯುಕ್ತಕ್ಕೆ ವಹಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ.(3)ರ ದಿ:11–7–1997 ಮತ್ತು ದಿ: 4–3–2003 ರ ಪತ್ರಗಳಲ್ಲಿ ಕರ್ನಾಟಕ ಲೋಕಾಯುಕ್ತವು, ಶ್ರೀ ಎಸ್.ಬಿ.ಜವಳಗಿ, ಸಹಾಯಕ ನಿರ್ದೇಶಕರು(ನಿವೃತ್ತ) ಶಿವಮೊಗ್ಗ ಇವರು, ಈ ಹಿಂದೆ ಶಿವಮೊಗ್ಗ ಸ್ವೀಕಾರ ಕೇಂದ್ರದಲ್ಲಿ ಪರಿವೀಕ್ಷಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಲೆಕ್ಕ ಪತ್ರಗಳ ನಿರ್ವಹಣೆ ಲೋಪಗಳ ಬಗ್ಗೆ ಕೆ.ಸಿ.ಎಸ್.(ಸಿಸಿಎ) ನಿಯಮಗಳಡಿಯಲ್ಲಿ ವಿಚಾರಣೆ ನಡೆಸಿ ಸರ್ಕಾರಕ್ಕೆ ವರದಿ ಕಳುಹಿಸಿರುತ್ತಾರೆ. ಸದರಿ ವರದಿಯಲ್ಲಿ ಶ್ರೀ ಎಸ್.ಬಿ.ಜವಳಗಿ, ಸಹಾಯಕ ನಿರ್ದೇಶಕರು(ನಿವೃತ್ತ),ಇವರು ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಈ ಕೆಳಕಂಡ ಆರೋಪಗಳಿಗೆ ಗುರಿಯಾಗಿರುತ್ತಾರೆ:–

**ಆರೋಪ–1:**

ಶ್ರೀ ಜವಳಗಿಯವರು ಶಿವಮೊಗ್ಗ, ಸ್ವೀಕಾರ ಕೇಂದ್ರದಲ್ಲಿ 1970 ರಿಂದ 1974 ರ ವರೆಗೆ ಪರಿವೀಕ್ಷಣಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ, ಶ್ರೀಯುತರು ದಿ:9–10–1972 ರಂದು 80 ಬುಷ್‌ಷರ್ಟ್‌ಗಳನ್ನು ಖರೀದಿಸಿ, ಮೂಲ ಸ್ಟಾಕ್‌ರಿಜಿಸ್ಟರ್‌ನಲ್ಲಿ ನಮೂದಿಸದೇ ತಪ್ಪನ್ನು ಎಸಗಿರುವುದು ಕಂಡುಬಂದಿದ್ದು, ಇದರಿಂದಾಗಿ ರೂ. 473.30 ನಷ್ಟ ಉಂಟಾಗಿರುತ್ತದೆ. ವಿಚಾರಣಾ ವರದಿಯಲ್ಲಿ ಈ ಆರೋಪವು ಸಾಬೀತಾಗಿರುತ್ತದೆ.

**ಆರೋಪ–2:–**

ಆರೋಪಿತ ಅಧಿಕಾರಿಯು ಮೂಲ ದಾಖಲಾತಿ ಸ್ಟಾಕ್ ರಿಜಿಸ್ಟರ್‌ಅನ್ನು ನಿರ್ವಹಿಸದೇ ಇದಕ್ಕೆ ತತ್ಸಂಬಂಧವಾಗಿ ನಕಲು ಸ್ಟಾಕ್‌ರಿಜಿಸ್ಟರ್ ಇಟ್ಟು, ಅಕ್ರಮವೆಸಗಿರುತ್ತಾರೆ. ವಿಚಾರಣಾ ವರದಿಯಲ್ಲಿ ಈ ಆರೋಪವು ಸಾಬೀತಾಗಿರುತ್ತದೆ.

ಆರೋಪ–3:

ಶ್ರೀಯುತರು ಪರಿವೀಕ್ಷಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀಮತಿ ಕೆ.ಎ.ಪೊನ್ನಮ್ಮ ರವರು ಅಧೀಕ್ಷಕರಾಗಿ ಸ್ವೀಕಾರ ಕೇಂದ್ರ, ಶಿವಮೊಗ್ಗ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, 32 ಚೇರುಗಳನ್ನು ರೂ.734.00 ಗಳಿಗೆ ಮಾರಾಟ ಮಾಡಿ ಲೆಕ್ಕಪುಸ್ತಕಗಳಲ್ಲಿ ನಮೂದಿಸದೇ ಇದ್ದ ತಪ್ಪು ಎಸಗಿರುವುದಕ್ಕೆ ಶ್ರೀ ಎಸ್.ಬಿ.ಜವಳಗಿಯವರು, 1978 ರಲ್ಲಿ ಹುಬ್ಬಳ್ಳಿಯಲ್ಲಿ ಪರಿವೀಕ್ಷಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಇವರು ಪೊನ್ನಮ್ಮ ರವರ ಕಚೇರಿಗೆ ಬಂದು ಲೆಕ್ಕಪುಸ್ತಕಗಳನ್ನು ತಿದ್ದಿ ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗಿರುತ್ತಾರೆ. ವಿಚಾರಣಾ ವರದಿಯಲ್ಲಿ ಈ ಆರೋಪವು ಸಾಬೀತಾಗಿರುತ್ತದೆ.

ಉಪ ಲೋಕಾಯುಕ್ತರವರು ಮೇಲಿನ ಪ್ರಕರಣದಲ್ಲಿ, ವಿವರವಾದ ಇಲಾಖಾ ವಿಚಾರಣೆ ನಡೆಸಿ, ಸದರಿಯವರ ವಿರುದ್ಧ ಆಪಾದನೆಗಳು ಸಾಬೀತಾಗಿರುವುದರಿಂದ, ಶ್ರೀ ಎಸ್.ಬಿ.ಜವಳಗಿ, ಸಹಾಯಕ ನಿರ್ದೇಶಕರು, (ನಿವೃತ್ತ) ಇವರಿಗೆ ಇವರ ಪಿಂಚಣಿಯಲ್ಲಿ ಶೇ. 30 ರಷ್ಟು ಪಿಂಚಣಿಯನ್ನು ಶಾಶ್ವತವಾಗಿ ಕಟಾಯಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(4) ರ ದಿ:2–9–2003ರ ನೋಟೀಸ್‌ನಲ್ಲಿ ಶ್ರೀ ಎಸ್.ಬಿ.ಜವಳಗಿ, ಸಹಾಯಕ ನಿರ್ದೇಶಕರು (ನಿವೃತ್ತ) ಇವರಿಗೆ ಉಪ ಲೋಕಾಯುಕ್ತವು ಶಿಫಾರಸ್ಸು ಮಾಡಿದಂತೆ, ದಂಡನೆಯನ್ನು ವಿಧಿಸುವ ಕುರಿತು ಸದರಿ ಆಪಾದಿತ ನೌಕರರಿಗೆ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (5) ದಿನಾಂಕ: 28–11–2003 ರ ಪತ್ರದಲ್ಲಿ ಆಪಾದಿತ ಅಧಿಕಾರಿಯು ನೋಟೀಸ್‌ಗೆ ನೀಡಿದ ಉತ್ತರಗಳನ್ನು ಪರಿಶೀಲಿಸಲಾಗಿ, ಅವರ ಹೇಳಿಕೆಗಳು ಸಮರ್ಪಕವಾಗಿಲ್ಲದ ಕಾರಣ, ಅದನ್ನು ಒಪ್ಪಿಕೊಳ್ಳದೇ, ಉಪ ಲೋಕಾಯುಕ್ತರವರು ಶಿಫಾರಸ್ಸು ಮಾಡಿರುವ ದಂಡನೆ ವಿಧಿಸಲು ಉದ್ದೇಶಿಸಿ, ಈ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಕೋರಲಾಗಿ, ಮೇಲೆ ಓದಲಾದ ಕ್ರ.ಸಂ. (6)ರ ದಿನಾಂಕ: 24–2–2004 ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು, ಸರ್ಕಾರದ ಪ್ರಸ್ತಾವನೆಯಂತೆ, ಆರೋಪಿತ ಅಧಿಕಾರಿಗೆ ಅವರ ಪಿಂಚಣಿಯಲ್ಲಿ ಶೇ. 30 ರಷ್ಟು ಪಿಂಚಣಿಯನ್ನು ಕಟಾಯಿಸಲು ಸಹಮತಿ ನೀಡಿದೆ.

ಈ ಪ್ರಕರಣಗಳಲ್ಲಿ ಉಪ ಲೋಕಾಯುಕ್ತರವರು ಶಿಫಾರಸ್ಸು ಮಾಡಿದಂತೆ, ಆಪಾದಿತ ಅಧಿಕಾರಿ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಲು ನಿಯಮಾನುಸಾರ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ: ಮಮಇ 57 ಎಸ್‌ಜೆಡಿ 1980(II), ಬೆಂಗಳೂರು, ದಿನಾಂಕ: 17ನೇ ಜೂನ್ 2004**

ಮೇಲೆ ವಿವರಿಸಲಾದ ಸನ್ನಿವೇಶದಲ್ಲಿ, ಶ್ರೀ ಎಸ್.ಬಿ.ಜವಳಗಿ, ಸಹಾಯಕ ನಿರ್ದೇಶಕರು (ನಿವೃತ್ತ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಈ ಹಿಂದೆ ಸ್ವೀಕಾರ ಕೇಂದ್ರ, ಶಿವಮೊಗ್ಗ ಇಲ್ಲಿ ಪರಿವೀಕ್ಷಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ, ಲೆಕ್ಕಪತ್ರಗಳ ನಿರ್ವಹಣೆ ಲೋಪಗಳ ಕುರಿತಂತೆ, ಶ್ರೀಯುತರ ವಿರುದ್ಧ ಕರ್ನಾಟಕ ಉಪ ಲೋಕಾಯುಕ್ತವು ನಡೆಸಿದ ವಿಚಾರಣೆಯಲ್ಲಿ ಆರೋಪಗಳು ಸಾಬೀತಾದ ಕಾರಣ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾನಿಯಮಾವಳಿಗಳ ನಿಯಮ 214(1)(ಎ)ರನ್ವಯ ಇವರ ಪಿಂಚಣಿಯಲ್ಲಿ ಶೇ.30 ರಷ್ಟು ಪಿಂಚಣಿಯನ್ನು ಶಾಶ್ವತವಾಗಿ ಕಟಾಯಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪ್ರ.ದ.ಸಿದ್ಧಾಂತಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 675

**ವಿಷಯ:** ಶ್ರೀಮತಿ ಪೊನ್ನಮ್ಮ ಸಹಾಯಕ ನಿರ್ದೇಶಕರು, ಶ್ರೀ ಎಸ್.ಬಿ.ಜವಳಗಿ ಸಹಾಯಕ ನಿರ್ದೇಶಕರು ಮತ್ತು ಶ್ರೀ ಜೆ.ಕೆ.ರೋಜಾರಿಯೋ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂ.ಎಸ್‌ಡಬ್ಲ್ಯೂಎಲ್ 57 ಎಸ್‌ಜೆಡಿ 80 ದಿನಾಂಕ:20–8–83
2) ಸರ್ಕಾರಿ ಆದೇಶ ಸಂ.ಎಸ್‌ಡಬ್ಲ್ಯೂಎಲ್ 57 ಎಸ್‌ಜೆಡಿ 80 ದಿನಾಂಕ:24–2–92
3) ಅ.ಸ.ಪತ್ರದ ಸಂಖ್ಯೆ: LOK/ARE-3/ENQ. 42/92 ದಿನಾಂಕ: 18–7–2002 ನಿಬಂಧಕರು ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರಿಂದ
4) ಕಾರಣ ಕೇಳುವ ನೋಟೀಸ್ ಪತ್ರದ ಸಂಖ್ಯೆ: 57 ಎಸ್‌ಜೆಡಿ 80 ದಿನಾಂಕ:29–5–2003
5) ಕಾರಣ ಕೇಳುವ ನೋಟೀಸ್‌ಗೆ ಉತ್ತರ ನೀಡಿದ ದಿನಾಂಕ: 16–8–2003.
6) ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪತ್ರ ದಿನಾಂಕ:24–2–2004.

ಪ್ರಸ್ತಾವನೆ:–

ಮೇಲೆ ಓದಲಾದ ಕ್ರ.ಸಂ. (1) ಮತ್ತು (2) ರ ದಿನಾಂಕ: 20–8–83 ಮತ್ತು ದಿನಾಂಕ: 24–2–92ರ ಆದೇಶಗಳಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿ/ನೌಕರರುಗಳಾದ ಶ್ರೀಮತಿ ಕೆ.ಎ.ಪೊನ್ನಮ್ಮ, ಹಿಂದಿನ ಅಧೀಕ್ಷಕರು (ಆಪಾದಿತ ನೌಕರರು–1), ಶ್ರೀ ಜೆ.ಕೆ.ರೋಜಾರಿಯೋ ಹಿಂದಿನ ಅಧೀಕ್ಷಕರು ಗ್ರೇಡ್–2(ಆಪಾದಿತ ನೌಕರರು–2), ಶ್ರೀ ಎಸ್.ಬಿ.ಜವಳಗಿ, ಹಿಂದಿನ ಪರಿವೀಕ್ಷಣಾಧಿಕಾರಿ(ಆಪಾದಿತ ನೌಕರರು–3) ಇವರುಗಳು ಸ್ವೀಕಾರ ಕೇಂದ್ರ, ಶಿವಮೊಗ್ಗದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಲೆಕ್ಕ ಪತ್ರ ನಿರ್ವಹಣೆ ಲೋಪಗಳ ಕುರಿತಂತೆ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ ಸಿಸಿಎ ನಿಯಮಗಳು 1957ರ ನಿಯಮ 14 ರನ್ವಯ ವಿವರವಾದ ತನಿಖೆ ಮತ್ತು ವಿಚಾರಣೆಯನ್ನು ನಡೆಸಿ ವರದಿಯನ್ನು ಒಪ್ಪಿಸುವಂತೆ ಕರ್ನಾಟಕ ಉಪ ಲೋಕಾಯುಕ್ತಕ್ಕೆ ವಹಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ.(3)ರ ದಿನಾಂಕ:18–7–2002 ರ ಪತ್ರದೊಂದಿಗೆ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಚೇರಿ, ಬೆಂಗಳೂರು ರವರು ಉಪಲೋಕಾಯುಕ್ತ ಸಲ್ಲಿಸಿದ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಕರ್ನಾಟಕ ಉಪ

ಲೋಕಾಯುಕ್ತರವರು, ಶ್ರೀಮತಿ ಕೆ.ಎ.ಪೊನ್ನಮ್ಮ, ಶ್ರೀ ಜೆ.ಕೆ.ರೊಜಾರಿಯೋ ಮತ್ತು ಶ್ರೀ ಎಸ್.ಬಿ.ಜವಳಗಿ –ಇವರುಗಳು, ಶಿವಮೊಗ್ಗ ಸ್ವೀಕಾರ ಕೇಂದ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಲೆಕ್ಕ ಪತ್ರಗಳ ನಿರ್ವಹಣೆ ಲೋಪಗಳ ಬಗ್ಗೆ ಕೆ.ಸಿ.ಎಸ್.(ಸಿಸಿಎ) ನಿಯಮಗಳಡಿಯಲ್ಲಿ ವಿಚಾರಣೆ ನಡೆಸಿ ಸರ್ಕಾರಕ್ಕೆ ಕಳುಹಿಸಿದ ವರದಿಯನ್ನು ಪರಿಶೀಲಿಸಲಾಗಿ, ಸದರಿಯವರುಗಳು ಈ ಕೆಳಕಂಡ ಆರೋಪಗಳಿಗೆ ಗುರಿಯಾಗಿರುತ್ತಾರೆ:–

**ಆರೋಪ–1:–**

ಶ್ರೀಮತಿ ಕೆ.ಎ.ಪೊನ್ನಮ್ಮ(ಆಪಾದಿತ ನೌಕರರು–1) ಇವರು ಶಿವಮೊಗ್ಗ ಸ್ವೀಕಾರ ಕೇಂದ್ರದಲ್ಲಿ ದಿ: 17–10–1969 ರಿಂದ ದಿ: 7–9–1972 ರ ವರೆಗೆ ಕಾರ್ಯ ನಿರ್ವಹಿಸಿದ್ದ ಅವಧಿಗೆ ದಿ: 14–10–1974 ರಿಂದ ದಿ:19–10–1974 ರ ವರೆಗೆ ಆಡಿಟ್ ಮಾಡಿದ ಸಂದರ್ಭದಲ್ಲಿ, ಸುಮಾರು 17,734–41 ರೂಪಾಯಿಗಳಷ್ಟು ದುರುಪಯೋಗಪಡಿಸಿಕೊಂಡಿರುವುದು ಕಂಡುಬಂದಿರುತ್ತದೆ ಹಾಗೂ ಮೂಲದಾಸ್ತಾನು ರಿಜಿಸ್ಟರ್‌ನಲ್ಲಿ, ದಾಖಲೆಗಳನ್ನು ತಿದ್ದಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ ಮತ್ತು 47 ಸ್ಟೀಲ್ ಪ್ಲೇಟ್‌ಗಳನ್ನು ಖರೀದಿಸಿದಂತೆ ಅನುಪಯುಕ್ತ ವಸ್ತುಗಳ ದಾಖಲಾತಿಗಳನ್ನು ನಮೂದಿಸುವ ಪುಸ್ತಕದಲ್ಲಿ ನಮೂದಿಸಿದ್ದು, ನಂತರ ದಾಖಲಾತಿಗಳನ್ನು ತಿದ್ದಿರುವ ಪ್ರಕಾರ ರೂ. 17,734.41 ಹೆಚ್ಚುವರಿ ಬದಲು ಕೇವಲ ರೂ.869.70 ಗಳನ್ನು ಹೆಚ್ಚುವರಿಯಾಗಿ ಕಂಡುಬರುವಂತೆ ತೋರಿಸಿರುತ್ತಾರೆ. ಈ ಸಂದರ್ಭದಲ್ಲಿ ಶ್ರೀ ಎಸ್.ಬಿ.ಜವಳಗಿ, ಸಹಾಯಕ ನಿರ್ದೇಶಕರು, ಇವರೂ ಸಹ ದಾಖಲಾತಿಗಳನ್ನು ತಿದ್ದಿರುವುದರಲ್ಲಿ ಸಹಕರಿಸಿರುವುದು ತಿಳಿದುಬಂದಿರುತ್ತದೆ. ನಂತರ ನಿರ್ದೇಶನಾಲಯವು ಆಡಿಟ್ ಆಕ್ಷೇಪಣೆ ರೂ.869.70 ಗಳನ್ನು ಮಾತ್ರ ಮೂವರು ಆರೋಪಿತ ನೌಕರರಿಂದ ವಸೂಲಾತಿ ಮಾಡುವಂತೆ ಸೂಚಿಸಿರುವುದು ಹಾಗೂ ಸದರಿ ನೌಕರರ ಸೇವಾ ಮನೋಭಾವನೆಯಿಲ್ಲದೆ, ಸರ್ಕಾರಿ ನೌಕರರಲ್ಲದ ರೀತಿಯಲ್ಲಿ ನಡೆದುಕೊಂಡಿರುತ್ತಾರೆ. ವಿಚಾರಣಾ ವರದಿಯಲ್ಲಿ ಈ ಆರೋಪವು ಸಾಬೀತಾಗಿರುತ್ತದೆ.

**ಆರೋಪ–2:–**

ಶ್ರೀಮತಿ ಕೆ.ಎ.ಪೊನ್ನಮ್ಮ(ಆಪಾದಿತ ನೌಕರರು–1) ರವರು 47 ಸ್ಟೈನ್‌ಲೆಸ್ ಸ್ಟೀಲ್ ಪ್ಲೇಟ್‌ಗಳನ್ನು ರೂ. 1282–00 ರಂತೆ ಖರೀದಿಸದೇ ಸುಳ್ಳು ರಸೀದಿಯನ್ನು ದಾಖಲಾತಿಗಳಲ್ಲಿ ಸೇರಿಸಿರುವುದು ಕಂಡುಬಂದಿರುತ್ತದೆ. ವಿಚಾರಣಾ ವರದಿಯಲ್ಲಿ ಎರಡನೇ ಆರೋಪವು ಸಾಬೀತಾಗಿರುತ್ತದೆ.

**ಆರೋಪ–3:–**

ಆರೋಪಿತ ನೌಕರರು–1 ತಮ್ಮ ಕರ್ತವ್ಯವನ್ನು ನಿಷ್ಠೆಯಿಂದ ಕರ್ತವ್ಯ ನಿರ್ವಹಿಸಬೇಕಾಗಿರುವುದು ಆದ್ಯ ಕರ್ತವ್ಯವಾಗಿದ್ದು, ಇವರು ಬೇಜವಾಬ್ದಾರಿತನ ಹಾಗೂ ಉದಾಸೀನತೆಯಿಂದ ನಡೆದುಕೊಂಡು ವಿವಿಧ 18 ವಸ್ತುಗಳನ್ನು ತಯಾರಾದ ಎರಡು ವರ್ಷಗಳ ನಂತರ ಹಂಚಿಕೆ ಮಾಡಿರುವುದು ಇವರ ಕರ್ತವ್ಯದಲ್ಲಿ ನಿಷ್ಠೆಯಿಲ್ಲದಿರುವುದು ಸ್ಪಷ್ಟವಾಗಿರುತ್ತದೆ. ವಿಚಾರಣಾ ವರದಿಯಲ್ಲಿ ಮೂರನೇ ಆರೋಪವು ಸಾಬೀತಾಗಿರುತ್ತದೆ.

**ಆರೋಪ–4:–**

ಆರೋಪಿತ ನೌಕರರು–1 ಇವರು ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಲೆಕ್ಕ ಪುಸ್ತಕಗಳನ್ನು ಸರಿಯಾಗಿ ನಿರ್ವಹಿಸದೇ ಇರುವುದು ತನಿಖಾಧಿಕಾರಿಗಳ ವರದಿಯಲ್ಲಿ ಕಂಡುಬಂದಿರುತ್ತದೆ. ವಿಚಾರಣಾ ವರದಿಯಲ್ಲಿ ನಾಲ್ಕನೇ ಆರೋಪವು ಸಾಬೀತಾಗಿರುತ್ತದೆ.

**ಆರೋಪ–5:–**

ಆರೋಪಿತ ನೌಕರರು–1, ವರ್ಗಾವಣೆಯಾಗಿ ದಿ: 7–9–1972 ರಂದು ಕಾರ್ಯಭಾರವನ್ನು ದಿ:2–6–1973 ರಂದು ವಹಿಸಿದ್ದು, ಈ ಸಂದರ್ಭದಲ್ಲಿ ಹೊಸದಾಗಿ ಲೆಕ್ಕಪುಸ್ತಕಗಳನ್ನು ತೆರೆದು ಹೆಚ್ಚಿನ ದಾಸ್ತಾನನ್ನು ತೋರಿಸಿರುವುದು ಕಂಡುಬಂದಿರುತ್ತದೆ ಹಾಗೂ ಈ ಸಂದರ್ಭದಲ್ಲಿ ಖರೀದಿಸಲು ಸ್ವಂತ ಹಣವಿದ್ದರೂ, ವಸ್ತುಗಳನ್ನು ಸಾಲದ ರೂಪದಲ್ಲಿ ಖರೀದಿಸಿರುವುದು ಕಂಡುಬರುತ್ತದೆ. ವಿಚಾರಣಾ ವರದಿಯಲ್ಲಿ ಐದನೇ ಆರೋಪವು ಸಾಬೀತಾಗಿರುತ್ತದೆ.

**ಆರೋಪ–6:–**

ಆರೋಪಿತ ನೌಕರರು–1, ಶಿವಮೊಗ್ಗದ ಸ್ವೀಕಾರ ಕೇಂದ್ರದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಲೆಕ್ಕಪುಸ್ತಕಗಳನ್ನು ತಿದ್ದಿರುವುದು ಹಾಗೂ ಇದನ್ನು ಸರಿಪಡಿಸಲು ಇಂದಿನ ಪರಿವೀಕ್ಷಣಾಧಿಕಾರಿಯಾದ ಶ್ರೀ ಎಸ್.ಬಿ. ಜವಳಗಿ,(ಆರೋಪಿತ ನೌಕರರು–3)ಇವರ ಸಹಕಾರ ಪಡೆದಿರುವುದು ಕಂಡು ಬಂದಿರುತ್ತದೆ. ಆದರೆ ಈ ಸಂದರ್ಭದಲ್ಲಿ, ಆರೋಪಿತ ಅಧಿಕಾರಿ (ಆರೋಪಿತ ನೌಕರರು–1) ಇವರು ಪೂರ್ಣ ಜವಾಬ್ದಾರರಾಗಿರುತ್ತಾರೆಂಬುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಂಡುಬಂದಿರುತ್ತದೆ. ವಿಚಾರಣಾ ವರದಿಯಲ್ಲಿ ಆರನೇ ಆರೋಪವು ಸಾಬೀತಾಗಿರುತ್ತದೆ.

ಲೋಕಾಯುಕ್ತರವರು ಮೇಲಿನ ಪ್ರಕರಣದಲ್ಲಿ, ವಿವರವಾದ ಇಲಾಖಾ ವಿಚಾರಣೆ ನಡೆಸಿದ ನಂತರ, ಜಂಟಿ ವಿಚಾರಣೆಯಲ್ಲಿ, ಶ್ರೀಮತಿ ಕೆ.ಎ.ಪೊನ್ನಮ್ಮ,ಸಹಾಯಕ ನಿರ್ದೇಶಕರು(ಕಡ್ಡಾಯ ನಿವೃತ್ತಿ)(ಆರೋಪಿತ ನೌಕರರು–1) ಇವರ ವಿರುದ್ಧ ಆರೋಪಗಳು ಸಾಬೀತಾಗಿರುವುದರಿಂದ ಇವರಿಗೆ ಇವರ ಪಿಂಚಣಿಯಲ್ಲಿ ಶೇ.20ರಷ್ಟು ಪಿಂಚಣಿಯನ್ನು ಶಾಶ್ವತವಾಗಿ ಕಟಾಯಿಸಲು ಲೋಕಾಯುಕ್ತವು ಶಿಫಾರಸು ಮಾಡಿರುತ್ತದೆ. ಶ್ರೀ ಜೆ.ಕೆ. ರೋಜಾರಿಯೋ, ಹಿಂದಿನ ಅಧೀಕ್ಷಕರು, ಗ್ರೇಡ್–2(ಆರೋಪಿತ ನೌಕರರು–2), ಇವರ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳುವ ಮುನ್ನವೇ ಮೃತಪಟ್ಟಿರುವುದರಿಂದ, ಲೋಕಾಯುಕ್ತವು ತನ್ನ ವರದಿಯಲ್ಲಿ `Stands abated` – ಎಂದು ವರದಿ ಮಾಡಿರುತ್ತದೆ. ಶ್ರೀ ಎಸ್.ಬಿ.ಜವಳಗಿ ಸಹಾಯಕ ನಿರ್ದೇಶಕರು, (ನಿವೃತ್ತ)(ಆರೋಪಿತ ನೌಕರರು–3) ಇವರ ವಿರುದ್ಧ ಆರೋಪಗಳು ಸಾಬೀತಾಗಿರುವುದಿಲ್ಲ.

ಮೇಲೆ ಓದಲಾದ ಕ್ರ.ಸಂ.(5) ರ ದಿನಾಂಕ:29–5–2003 ನೋಟೀಸ್‌ನಲ್ಲಿ ಶ್ರೀಮತಿ ಕೆ.ಎ.ಪೊನ್ನಮ್ಮ ಸಹಾಯಕ ನಿರ್ದೇಶಕರು, (ಕಡ್ಡಾಯ ನಿವೃತ್ತಿ) ಇವರ ಮೇಲೆ ಕ್ರಮ ಕೈಗೊಳ್ಳಲು ಲೋಕಾಯುಕ್ತವು ಶಿಫಾರಸ್ಸು ಮಾಡಿದಂತೆ, ದಂಡನೆಯನ್ನು ವಿಧಿಸುವ ಕುರಿತು ಆಪಾದಿತನೌಕರರು–1 ರವರಿಗೆ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (6) ದಿನಾಂಕ: 16–8–2003 ರ ಪತ್ರದಲ್ಲಿ ಆಪಾದಿತ ಅಧಿಕಾರಿ(ಆಪಾದಿತ ನೌಕರರು–1)ರವರಿಗೆ ನೋಟೀಸ್‌ಗೆ ನೀಡಿದ ಉತ್ತರವನ್ನು ಪರಿಶೀಲಿಸಲಾಗಿ, ಅವರ ಹೇಳಿಕೆಗಳು ಸಮರ್ಪಕವಾಗಿಲ್ಲದ ಕಾರಣ, ಅದನ್ನು ಒಪ್ಪಿಕೊಳ್ಳದೇ ಲೋಕಾಯುಕ್ತ ಶಿಫಾರಸ್ಸು ಮಾಡಿರುವ ದಂಡನೆ ವಿಧಿಸಲು ಉದ್ದೇಶಿಸಿ, ಈ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಕೋರಲಾಗಿ, ಮೇಲೆ ಓದಲಾದ ಕ್ರ.ಸಂ. (7)ರ ದಿನಾಂಕ: 24–2–2004 ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು, ಸರ್ಕಾರದ ಪ್ರಸ್ತಾವನೆಯಂತೆ, ಆರೋಪಿತ ಅಧಿಕಾರಿಗೆ ಅವರ ಪಿಂಚಣಿಗಳಲ್ಲಿ ಶೇ. 20 ರಷ್ಟು ಪಿಂಚಣಿಯನ್ನು ಕಟಾಯಿಸಲು ಸಹಮತಿ ನೀಡಿದೆ.

ಈ ಪ್ರಕರಣದಲ್ಲಿ ಶ್ರೀಮತಿ ಕೆ.ಎ.ಪೊನ್ನಮ್ಮ, ಸಹಾಯಕನಿರ್ದೇಶಕರು(ಕಡ್ಡಾಯ ನಿವೃತ್ತಿ) (ಆಪಾದಿತ ನೌಕರರು–1)ಇವರ ವಿರುದ್ಧ ಇರುವ ಎಲ್ಲಾ ಆರೋಪಗಳು ಸಾಬೀತಾಗಿರುವುದರಿಂದ, ಲೋಕಾಯುಕ್ತರವರು ಶಿಫಾರಸ್ಸು ಮಾಡಿದಂತೆ, ಆಪಾದಿತ ಅಧಿಕಾರಿ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಲು ನಿಯಮಾನುಸಾರ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಮಮಇ 57 ಎಸ್‌ಜೆಡಿ 1980(1), ಬೆಂಗಳೂರು, ದಿನಾಂಕ: 16ನೇ ಜೂನ್ 2004**

ಮೇಲೆ ವಿವರಿಸಲಾದ ಸನ್ನಿವೇಶದಲ್ಲಿ, ಶ್ರೀಮತಿ ಕೆ.ಎ.ಪೊನ್ನಮ್ಮ, ಸಹಾಯಕ ನಿರ್ದೇಶಕರು,(ಕಡ್ಡಾಯ ನಿವೃತ್ತಿ) (ಆಪಾದಿತ ನೌಕರರು–1) ಇವರು ಈ ಹಿಂದೆ ಸ್ವೀಕಾರ ಕೇಂದ್ರ, ಶಿವಮೊಗ್ಗ ಇಲ್ಲಿ ಅಧೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ, ಲೆಕ್ಕಪತ್ರಗಳ ನಿರ್ವಹಣೆ ಲೋಪಗಳ ಕುರಿತಂತೆ, ಸದರಿಯವರ ವಿರುದ್ಧ ಕರ್ನಾಟಕ ಉಪಲೋಕಾಯುಕ್ತವು ನಡೆಸಿದ ಜಂಟಿವಿಚಾರಣೆಯಲ್ಲಿ ಆರೋಪಗಳು ಸಾಬೀತಾದ ಕಾರಣ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾನಿಯಮಾವಳಿಗಳ ನಿಯಮ 214(1)(ಎ)ರನ್ವಯ ಇವರ ಪಿಂಚಣಿಯಲ್ಲಿ, ಶೇ.20ರಷ್ಟು, ಪಿಂಚಣಿಯನ್ನು ಶಾಶ್ವತವಾಗಿ ಕಟಾಯಿಸಲು ಆದೇಶಿಸಿದೆ.

ಶ್ರಿ ಜೆ.ಕೆ.ರೋಜಾರಿಯೋ, ಹಿಂದಿನ ಅಧೀಕ್ಷಕರು ಗ್ರೇಡ್–2(ಆಪಾದಿತ ನೌಕರರು–2), ಇವರು ಇಲಾಖಾ ವಿಚಾರಣೆ ಕೈಗೊಳ್ಳುವ ಮುನ್ನವೇ ಮೃತಪಟ್ಟಿರುವುದರಿಂದ ಇವರ ವಿರುದ್ಧ ಇರುವ ಆರೋಪಗಳನ್ನು ಕೈಬಿಟ್ಟು, ಇವರ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಶ್ರೀ ಎಸ್.ಬಿ.ಜವಳಗಿ, ಸಹಾಯಕನಿರ್ದೇಶಕರು (ನಿವೃತ್ತ)(ಆಪಾದಿತ ನೌಕರರು–3) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ವಿರುದ್ಧ ಆರೋಪಗಳು ಸಾಬೀತಾಗದೇ ಇರುವ ಕಾರಣ ಇವರನ್ನು ಈ ಪ್ರಕರಣದ ಇಲಾಖಾ ವಿಚಾರಣೆಯಿಂದ ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ.ಸಿದ್ಧಾಂತಿ**

**ಪಿ.ಆರ್. 676** ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಜಲಸಂಪನ್ಮೂಲ ಸಚಿವಾಲಯ**

**ವಿಷಯ:** ಹೇಮಾವತಿ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿ ಪುನರ್ ರಚನೆಯ ಬಗ್ಗೆ.

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು, ರವರ ಪತ್ರ ಸಂಖ್ಯೆ:ವ್ಯನಿ/ಕಾನೀನಿನಿ/ಮೈ/ತಾಂತ್ರಿಕ/ನೀ.ಸಲಹಾ.ಸಮಿತಿ/04–05/4284 ದಿನಾಂಕ 10.06.2004.

**ಪ್ರಸ್ತಾವನೆ:**

1. ಮೇಲೆ ಓದಲಾದ ದಿನಾಂಕ 10.06.2004ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು, ಇವರು ಹೇಮಾವತಿ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.
2. ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 102 ಎನ್‌ಎಚ್‌ಪಿ 2004, ಬೆಂಗಳೂರು, ದಿನಾಂಕ: 24ನೇ ಜೂನ್ 2004**

ಹೇಮಾವತಿ ಜಲಾಶಯದ ನೀರಿನ ನಿರ್ವಹಣೆಗಾಗಿ ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರನ್ನೊಳಗೊಂಡ ನೀರಾವರಿ ಸಲಹಾ ಸಮಿತಿಯನ್ನು ಮುಂದಿನ ಆದೇಶ ಹೊರಡಿಸುವವರೆಗೂ ಕೆಳಕಂಡಂತೆ ಪರಿಷ್ಕರಿಸಿ ಈ ಕೂಡಲೇ ಜಾರಿಗೆ ಬರುವಂತೆ ಪುನರ್ ರಚಿಸಲಾಗಿದೆ.

**ಅಧ್ಯಕ್ಷರು:–**

ಮಾನ್ಯ ಲೋಕೋಪಯೋಗಿ ಹಾಗೂ ವಿದ್ಯುತ್ ಸಚಿವರು.

**ಅಧಿಕಾರಿ ಸದಸ್ಯರು:**

1. ಆಡಳಿತಾಧಿಕಾರಿಗಳು, ಕಾವೇರಿ ಜಲಾನಯನ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಮೈಸೂರು.
2. ಮುಖ್ಯ ಇಂಜಿನಿಯರ್, ಹೇಮಾವತಿ ಯೋಜನೆ, ಗೊರೂರು.
3. ಮುಖ್ಯ ಇಂಜಿನಿಯರ್, ಹೇಮಾವತಿ ನಾಲಾ ವಲಯ, ತುಮಕೂರು.
4. ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ.
5. ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.
6. ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.
7. ಅಧೀಕ್ಷಕ ಅಭಿಯಂತರರು, ಹೇಮಾವತಿ ಯೋಜನಾ ವೃತ್ತ, ಗೊರೂರು. ಸದಸ್ಯ ಕಾರ್ಯದರ್ಶಿ

**ಅಧಿಕಾರೇತರ ಸದಸ್ಯರು:–**

1. ಅಧ್ಯಕ್ಷರು, ಕಾವೇರಿ ಜಲಾನಯನ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಮೈಸೂರು.
2. ಶ್ರೀ ಎನ್.ಚಲುವರಾಯಸ್ವಾಮಿ, ವಿಧಾನ ಸಭಾ ಸದಸ್ಯರು, ನಾಗಮಂಗಲ ಕ್ಷೇತ್ರ.
3. ಶ್ರೀ ಎಸ್.ಆರ್. ಶ್ರೀನಿವಾಸ್, ವಿಧಾನ ಸಭಾ ಸದಸ್ಯರು, ಗುಬ್ಬಿ ಕ್ಷೇತ್ರ.
4. ಶ್ರೀ ಹೆಚ್. ನಿಂಗಪ್ಪ, ವಿಧಾನ ಸಭಾ ಸದಸ್ಯರು, ಕುಣಿಗಲ್ ಕ್ಷೇತ್ರ.
5. ಶ್ರೀ ಎ.ಟಿ.ರಾಮಸ್ವಾಮಿ, ವಿಧಾನ ಸಭಾ ಸದಸ್ಯರು, ಅರಕಲಗೂಡು ಕ್ಷೇತ್ರ.
6. ಶ್ರೀ ಹೆಚ್.ಎಸ್.ಪ್ರಕಾಶ್, ವಿಧಾನ ಸಭಾ ಸದಸ್ಯರು, ಹಾಸನ ಕ್ಷೇತ್ರ.
7. ಶ್ರೀ ಸಿ.ಎಸ್.ಪುಟ್ಟೇಗೌಡ, ವಿಧಾನ ಸಭಾ ಸದಸ್ಯರು, ಶ್ರವಣಬೆಳಗೊಳ ಕ್ಷೇತ್ರ.
8. ಶ್ರೀ ಎಸ್. ಶಿವಣ್ಣ, ವಿಧಾನ ಸಭಾ ಸದಸ್ಯರು, ತುಮಕೂರು ಕ್ಷೇತ್ರ

**ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರುಗಳು:–**

1. ಸರ್ಕಾರದ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.
2. ಸರ್ಕಾರದ ಕಾರ್ಯದರ್ಶಿಗಳು, ಕಾನೂನು ಇಲಾಖೆ, ಬೆಂಗಳೂರು.
3. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು.
4. ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ.
5. ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.
6. ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.
7. ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ತುಮಕೂರು.
8. ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಮಂಡ್ಯ.
9. ನಿರ್ದೇಶಕರು, ವಿ.ಸಿ.ಫಾರಂ ಮಂಡ್ಯ.

**ವಿಶೇಷ ಆಹ್ವಾನಿತ ಅಧಿಕಾರೇತರರು :–**
**(ಮಾನ್ಯ ಶ್ರೀಯುತರಾದ)**

1. ಹೆಚ್.ಡಿ. ದೇವೇಗೌಡ, ಲೋಕಸಭಾ ಸದಸ್ಯರು, ಹಾಸನ ಕ್ಷೇತ್ರ,
2. ಹೆಚ್. ಮಲ್ಲಿಕಾರ್ಜುನಯ್ಯ, ಲೋಕಸಭಾ ಸದಸ್ಯರು, ತುಮಕೂರು.
3. ಅಂಬರೀಶ್, ಲೋಕಸಭಾ ಸದಸ್ಯರು, ಮಂಡ್ಯ ಜಿಲ್ಲೆ, ಮಂಡ್ಯ.
4. ಹೆಚ್.ಬಿ. ರಾಮು, ವಿಧಾನ ಸಭಾ ಸದಸ್ಯರು, ಕೆರಗೋಡು ಕ್ಷೇತ್ರ.
5. ಕೆ.ಎಸ್.ಕಿರಣ್ ಕುಮಾರ್, ವಿಧಾನ ಸಭಾ ಸದಸ್ಯರು, ಕಳ್ಳಂಬೆಳ್ಳ ಕ್ಷೇತ್ರ.
6. ಜೆ.ಸಿ.ಮಾಧುಸ್ವಾಮಿ, ವಿಧಾನ ಸಭಾ ಸದಸ್ಯರು, ಚಿಕ್ಕನಾಯಕನಹಳ್ಳಿ.
7. ಬಿ.ನಂಜಾಮರಿ, ವಿಧಾನ ಸಭಾ ಸದಸ್ಯರು, ತಿಪಟೂರು. ಕ್ಷೇತ್ರ.
8. ಸಿ.ಎಸ್. ಪುಟ್ಟರಾಜು, ವಿಧಾನ ಸಭಾ ಸದಸ್ಯರು, ಪಾಂಡವಪುರ ಕ್ಷೇತ್ರ
9. ಎಂ.ಟಿ.ಕೃಷ್ಣಪ್ಪ, ವಿಧಾನ ಸಭಾ ಸದಸ್ಯರು, ತುರುವೇಕೆರೆ ಕ್ಷೇತ್ರ.
10. ಡಿ.ನಾಗರಾಜಯ್ಯ, ವಿಧಾನ ಸಭಾ ಸದಸ್ಯರು, ಹುಲಿಯೂರುದುರ್ಗ ಕ್ಷೇತ್ರ.
11. ಕೆ.ಎನ್. ರಾಜಣ್ಣ, ವಿಧಾನ ಸಭಾ ಸದಸ್ಯರು, ಬೆಳ್ಳಾವಿ ಕ್ಷೇತ್ರ.
12. ಎಸ್.ಎಂ.ಆನಂದ್, ವಿಧಾನ ಪರಿಷತ್ ಸದಸ್ಯರು, ಹಾಸನ.
13. ಬಿ.ಎಲ್. ಜಗದೀಶ್, ವಿಧಾನ ಪರಿಷತ್ ಸದಸ್ಯರು, ತುಮಕೂರು

ಅಧಿಕಾರೇತರ ಸದಸ್ಯರ ಮತ್ತು ವಿಶೇಷ ಆಹ್ವಾನಿತರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಏಫ್‌ಡಿ 2 ಎಸ್‌ಆರ್‌ಎ 2000 ದಿನಾಂಕ 03.02.2001ರನ್ವಯ ನೀಡತಕ್ಕದ್ದು ಹಾಗೂ ತಗಲುವ ವೆಚ್ಚವನ್ನು ಕಾವೇರಿ ನೀರಾವರಿ ನಿಗಮ ನಿಯಮಿತದಡಿ ಭರಿಸತಕ್ಕದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಲ್. ಜಗದೀಶ್**

**ಪಿ.ಆರ್. 689** ವಿಶೇಷ ಕರ್ತವ್ಯಾಧಿಕಾರಿ(ತಾಂ.ಎಂಎಂಐ–3), ಜಲ ಸಂಪನ್ಮೂಲ ಇಲಾಖೆ

**ವಿಷಯ:** ಹಾರಂಗಿ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿ ಪುನರ್ ರಚನೆಯ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಜಸಂಇ 3 ಎಂಎಂಹೆಚ್ 2000, ದಿನಾಂಕ: 03.12.2002.

2. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು, ರವರ ಪತ್ರ ಸಂಖ್ಯೆ:ವ್ಯನಿ/ಕಾನೀನಿನಿ/ಮೈ/ತಾಂತ್ರಿಕ/ನೀ.ಸಲಹಾ.ಸಮಿತಿ/04–05/4283 ದಿನಾಂಕ: 10.06.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಾರಂಗಿ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸಲಾಗಿತ್ತು.

2. ಮೇಲೆ (2) ಓದಲಾದ ದಿನಾಂಕ 10.06.2004ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು, ಇವರು ಹಾರಂಗಿ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

3. ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 10 ಎಂಎಂಹೆಚ್ 2004, ಬೆಂಗಳೂರು, ದಿನಾಂಕ: 24ನೇ ಜೂನ್ 2004**

ಹಾರಂಗಿ ಜಲಾಶಯದ ನೀರಿನ ನಿರ್ವಹಣೆಗಾಗಿ ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರನ್ನೊಳಗೊಂಡ ನೀರಾವರಿ ಸಲಹಾ ಸಮಿತಿಯನ್ನು ಮುಂದಿನ ಆದೇಶ ಹೊರಡಿಸುವವರೆಗೂ ಈ ಕೆಳಕಂಡಂತೆ ಪರಿಷ್ಕರಿಸಿ ಈ ಕೂಡಲೇ ಜಾರಿಗೆ ಬರುವಂತೆ ಪುನರ್ ರಚಿಸಲಾಗಿದೆ.

**ಅಧ್ಯಕ್ಷರು:–**

1. ಅಧ್ಯಕ್ಷರು, ಕಾವೇರಿ ಜಲಾನಯನ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಮೈಸೂರು.

**ಅಧಿಕಾರಿ ಸದಸ್ಯರು:**

1. ಆಡಳಿತಾಧಿಕಾರಿಗಳು, ಕಾವೇರಿ ಜಲಾನಯನ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಮೈಸೂರು.
2. ಮುಖ್ಯ ಇಂಜಿನಿಯರ್, ನೀರಾವರಿ (ದಕ್ಷಿಣ) ವಲಯ, ಮೈಸೂರು.
3. ಅಧೀಕ್ಷಕ ಅಭಿಯಂತರರು, ಹಾರಂಗಿ ಯೋಜನಾ ವೃತ್ತ, ಕುಶಾಲನಗರ.
4. ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ.
5. ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ.
6. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.
7. ಕಾರ್ಯಪಾಲಕ ಅಭಿಯಂತರರು, ಹಾರಂಗಿ ಅಣೆಕಟ್ಟು ವಿಭಾಗ, ಹುಲಗುಂದ. ಸದಸ್ಯ ಕಾರ್ಯದರ್ಶಿ.

**ಅಧಿಕಾರೇತರ ಸದಸ್ಯರು:–**

1. ಶ್ರೀ ಬಿ.ಎ. ಜೀವಿಜಯ, ಮಾನ್ಯ ಶಾಸಕರು, ಸೋಮವಾರ ಪೇಟೆ ಕ್ಷೇತ್ರ.
2. ಶ್ರೀ ಎ.ಟಿ. ರಾಮಸ್ವಾಮಿ, ಮಾನ್ಯ ಶಾಸಕರು, ಅರಕಲಗೂಡು ಕ್ಷೇತ್ರ.
3. ಶ್ರೀ ಕೆ. ವೆಂಕಟೇಶ್, ಮಾನ್ಯ ಶಾಸಕರು, ಪಿರಿಯಾಪಟ್ಟಣ ಕ್ಷೇತ್ರ.
4. ಶ್ರೀ ಜಿ.ಟಿ. ದೇವೇಗೌಡ, ಮಾನ್ಯ ಶಾಸಕರು, ಹುಣಸೂರು ಕ್ಷೇತ್ರ.
5. ಶ್ರೀ ಮಹಾದೇವ, ಮಾನ್ಯ ಶಾಸಕರು, ಕೆ.ಆರ್. ನಗರ ಕ್ಷೇತ್ರ.

**ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರುಗಳು–**

1. ಸರ್ಕಾರದ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.
2. ಸರ್ಕಾರದ ಕಾರ್ಯದರ್ಶಿಗಳು, ಕಾನೂನು ಇಲಾಖೆ, ಬೆಂಗಳೂರು.
3. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು.
4. ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಡಗು.
5. ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾಸನ.
6. ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಮೈಸೂರು.
7. ಜಂಟಿ ಕೃಷಿ ನಿರ್ದೇಶಕರು, ಮೈಸೂರು ವಿಭಾಗ, ಮೈಸೂರು.

**ವಿಶೇಷ ಆಹ್ವಾನಿತರು :–**

1. ಶ್ರೀ ಸಿದ್ದರಾಮಯ್ಯ, ಮಾನ್ಯ ಉಪಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ.
2. ಶ್ರೀ ಹೆಚ್.ಡಿ. ದೇವೇಗೌಡ, ಮಾನ್ಯ ಲೋಕಸಭಾ ಸದಸ್ಯರು, ಹಾಸನ ಕ್ಷೇತ್ರ,
3. ಶ್ರೀ ಸಿ.ಹೆಚ್. ವಿಜಯಶಂಕರ್, ಮಾನ್ಯ ಲೋಕಸಭಾ ಸದಸ್ಯರು, ಮೈಸೂರು.
4. ಶ್ರೀ ಡಿ.ವಿ. ಸದಾನಂದಗೌಡ, ಮಾನ್ಯ ಲೋಕಸಭಾ ಸದಸ್ಯರು, ಮಂಗಳೂರು.

ಅಧಿಕಾರೇತರ ಸದಸ್ಯರ ಮತ್ತು ವಿಶೇಷ ಆಹ್ವಾನಿತರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000 ದಿನಾಂಕ 03.02.2001ರನ್ವಯ ನೀಡತಕ್ಕದ್ದು. ಈ ಬಗ್ಗೆ ತಗಲುವ ವೆಚ್ಚವನ್ನು ಕಾವೇರಿ ನೀರಾವರಿ ನಿಗಮದಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಲ್. ಜಗದೀಶ್**

ಪಿ.ಆರ್. 678 ವಿಶೇಷ ಕರ್ತವ್ಯಾಧಿಕಾರಿ(ತಾಂ.ಎಂಎಂಐ–3), ಜಲ ಸಂಪನ್ಮೂಲ ಇಲಾಖೆ

**ವಿಷಯ:** ಕಬಿನಿ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿ ಪುನರ್ ರಚನೆಯ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ನೀಇ 9 ಎಂಎಂಕೆ 2000, ದಿನಾಂಕ 27.07.2001.

2. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರುರವರ ಪತ್ರ ಸಂಖ್ಯೆ:ವ್ಯನಿ/ಕಾನೀನಿನಿ/ಮೈ/ತಾಂತ್ರಿಕ/ನೀ.ಸಲಹಾ ಸಮಿತಿ/04–05 ದಿನಾಂಕ 10.06.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಬಿನಿ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸಲಾಗಿತ್ತು.

2. ಮೇಲೆ (2) ಓದಲಾದ ದಿನಾಂಕ 10.06.2004ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು, ಇವರು ಕಬಿನಿ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

3. ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 58 ಎಂಎಂಕೆ 2004, ಬೆಂಗಳೂರು, ದಿನಾಂಕ: 24ನೇ ಜೂನ್ 2004**

ಕಬಿನಿ ಜಲಾಶಯದ ನೀರಿನ ನಿರ್ವಹಣೆಗಾಗಿ ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರನ್ನೊಳಗೊಂಡ ನೀರಾವರಿ ಸಲಹಾ ಸಮಿತಿಯನ್ನು ಮುಂದಿನ ಆದೇಶ ಹೊರಡಿಸುವವರೆಗೂ ಈ ಕೆಳಕಂಡಂತೆ ಪರಿಷ್ಕರಿಸಿ ಈ ಕೂಡಲೇ ಜಾರಿಗೆ ಬರುವಂತೆ ಪುನರ್ ರಚಿಸಲಾಗಿದೆ.

**ಅಧ್ಯಕ್ಷರು:–**

ಅಧ್ಯಕ್ಷರು, ಕಾವೇರಿ ಜಲಾನಯನ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಮೈಸೂರು.

**ಅಧಿಕಾರಿ ಸದಸ್ಯರು:**

1. ಆಡಳಿತಾಧಿಕಾರಿಗಳು, ಕಾವೇರಿ ಜಲಾನಯನ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಮೈಸೂರು.
2. ಮುಖ್ಯ ಇಂಜಿನಿಯರ್, ನೀರಾವರಿ (ದಕ್ಷಿಣ) ವಲಯ, ಮೈಸೂರು.
3. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.
4. ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ.
5. ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಮೈಸೂರು.
6. ಸಂಶೋಧನಾಧಿಕಾರಿಗಳು, ವಿ.ಸಿ.ಫಾರಂ, ಮಂಡ್ಯ.
7. ಅಧೀಕ್ಷಕ ಅಭಿಯಂತರರು, ಕಬಿನಿ ಮತ್ತು ವರುಣಾ ನಾಲಾ ವೃತ್ತ, ಮೈಸೂರು. ಸದಸ್ಯ ಕಾರ್ಯದರ್ಶಿ

**ಅಧಿಕಾರೇತರ ಸದಸ್ಯರು:–**

1. ಶ್ರೀ ಎಂ.ಪಿ.ವೆಂಕಟೇಶ್, ಮಾನ್ಯ ಶಾಸಕರು, ಹೆಚ್.ಡಿ.ಕೋಟೆ.
2. ಶ್ರೀ ಡಿ.ಟಿ.ಜಯಕುಮಾರ್, ಮಾನ್ಯ ಶಾಸಕರು, ನಂಜನಗೂಡು.
3. ಶ್ರೀ ಹೆಚ್.ಸಿ.ಮಹಾದೇವಪ್ಪ, ಮಾನ್ಯ ಶಾಸಕರು, ಟಿ.ನರಸೀಪುರ.
4. ಶ್ರೀಮತಿ ಟಿ. ಸುನೀತಾ ವೀರಪ್ಪಗೌಡ, ಮಾನ್ಯ ಶಾಸಕರು, ಬನ್ನೂರು.
5. ಶ್ರೀ ಆರ್. ಧೃವನಾರಾಯಣ, ಮಾನ್ಯ ಶಾಸಕರು, ಸಂತೇಮರಹಳ್ಳಿ.
6. ಶ್ರೀ ವಾಟಾಳ್ ನಾಗರಾಜ್, ಮಾನ್ಯ ಶಾಸಕರು, ಚಾಮರಾಜನಗರ.
7. ಶ್ರೀ ಎಸ್. ಬಾಲರಾಜ, ಮಾನ್ಯ ಶಾಸಕರು, ಕೊಳ್ಳೇಗಾಲ.
8. ಶ್ರೀಮತಿ ಕೆ.ಎಸ್. ಪರಿಮಳ, ಮಾನ್ಯ ಶಾಸಕರು, ಹನೂರು.

**ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರುಗಳು:–**

1. ಸರ್ಕಾರದ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.
2. ಸರ್ಕಾರದ ಕಾರ್ಯದರ್ಶಿಗಳು, ಕಾನೂನು ಇಲಾಖೆ, ಬೆಂಗಳೂರು.
3. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು.

**ವಿಶೇಷ ಆಹ್ವಾನಿತ ಸದಸ್ಯರುಗಳು:–**

1. ಶ್ರೀ ಸಿದ್ದರಾಮಯ್ಯ, ಮಾನ್ಯ ಉಪಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ.
2. ಶ್ರೀ ಸಿ.ಹೆಚ್. ವಿಜಯಶಂಕರ್, ಮಾನ್ಯ ಲೋಕಸಭಾ ಸದಸ್ಯರು, ಮೈಸೂರು.
3. ಶ್ರೀ ಎಂ. ಶಿವಣ್ಣ, ಮಾನ್ಯ ಲೋಕಸಭಾ ಸದಸ್ಯರು, ಚಾಮರಾಜನಗರ.
4. ಶ್ರೀ ಬಿ. ಚಿದಾನಂದ, ಮಾನ್ಯ ವಿಧಾನ ಪರಿಷತ್ ಸದಸ್ಯರು, ಮೈಸೂರು.
5. ಶ್ರೀ ಎನ್. ಮಂಜುನಾಥ್, ಮಾನ್ಯ ವಿಧಾನ ಪರಿಷತ್ ಸದಸ್ಯರು, ಮೈಸೂರು.

ಅಧಿಕಾರೇತರ ಸದಸ್ಯರ ಮತ್ತು ವಿಶೇಷ ಆಹ್ವಾನಿತರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000 ದಿನಾಂಕ 03.02.2001ರನ್ವಯ ನೀಡತಕ್ಕದ್ದು. ಈ ಬಗ್ಗೆ ತಗಲುವ ವೆಚ್ಚವನ್ನು ಕಾವೇರಿ ನೀರಾವರಿ ನಿಗಮ ನಿಯಮಿತದಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಲ್. ಜಗದೀಶ್**

ಪಿ.ಆರ್. 690 ವಿಶೇಷ ಕರ್ತವ್ಯಾಧಿಕಾರಿ(ತಾಂ.ಎಂಎಂಐ–3), ಜಲ ಸಂಪನ್ಮೂಲ ಇಲಾಖೆ

**ವಿಷಯ:** ಕೃಷ್ಣರಾಜಸಾಗರ ಯೋಜನೆಯ ನೀರಾವರಿ ಸಲಹಾ ಸಮಿತಿ ಪುನರ್ ರಚನೆಯ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ನೀಇ 237 ಎಂಎಂಕೆ 99, ದಿನಾಂಕ 11.04.2000.

2. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು, ಇವರ ಪತ್ರ ಸಂಖ್ಯೆ:ವ್ಯನಿ/ಕಾನೀನಿನಿ/ಮೈ/ತಾಂತ್ರಿಕ/ನೀ.ಸಲಹಾ ಸಮಿತಿ/04–05/4250 ದಿನಾಂಕ 10.06.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೃಷ್ಣರಾಜಸಾಗರ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸಲಾಗಿತ್ತು.

1. ಮೇಲೆ (2)ರಲ್ಲಿ ಓದಲಾದ ದಿನಾಂಕ 10.06.2004ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು, ಇವರು ಕೃಷ್ಣರಾಜಸಾಗರ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

2. ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 57 ಎಂಎಂಕೆ 2004, ಬೆಂಗಳೂರು, ದಿನಾಂಕ: 29ನೇ ಜೂನ್ 2004**

ಕೃಷ್ಣರಾಜಸಾಗರ ಜಲಾಶಯದ ನೀರಿನ ನಿರ್ವಹಣೆಗಾಗಿ ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರನ್ನೊಳಗೊಂಡ ನೀರಾವರಿ ಸಲಹಾ ಸಮಿತಿಯನ್ನು ಮುಂದಿನ ಆದೇಶ ಹೊರಡಿಸುವವರೆಗೂ ಈ ಕೆಳಕಂಡಂತೆ ಪರಿಷ್ಕರಿಸಿ ಈ ಕೂಡಲೇ ಜಾರಿಗೆ ಬರುವಂತೆ ಪುನರ್ ರಚಿಸಲಾಗಿದೆ.

**ಅಧ್ಯಕ್ಷರು:–**

ಅಧ್ಯಕ್ಷರು, ಕಾವೇರಿ ಜಲಾನಯನ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಮೈಸೂರು.

**ಅಧಿಕಾರಿ ಸದಸ್ಯರು:**

1. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು.
2. ಆಡಳಿತಾಧಿಕಾರಿಗಳು, ಕಾವೇರಿ ಜಲಾನಯನ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಮೈಸೂರು.
3. ಮುಖ್ಯ ಇಂಜಿನಿಯರ್, ನೀರಾವರಿ (ದಕ್ಷಿಣ) ವಲಯ, ಮೈಸೂರು.
4. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.
5. ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.
6. ಅಧೀಕ್ಷಕ ಅಭಿಯಂತರರು, ಕಬಿನಿ ನಾಲಾ ವೃತ್ತ, ಮೈಸೂರು.
7. ಅಧೀಕ್ಷಕ ಅಭಿಯಂತರರು ಕೆ.ಆರ್.ಎಸ್. ಆ ಮತ್ತು ಮ ನೀ.ಯೋ.ವೃತ್ತ, ಮಂಡ್ಯ. ಸದಸ್ಯ ಕಾರ್ಯದರ್ಶಿ

**ಅಧಿಕಾರೇತರ ಸದಸ್ಯರು:**

1. ಶ್ರೀ ಎಂ. ಶ್ರೀನಿವಾಸ, ಮಾನ್ಯ ಶಾಸಕರು, ಮಂಡ್ಯ.
2. ಶ್ರೀಮತಿ ಎಂ.ಕೆ. ನಾಗಮಣಿ, ಮಾನ್ಯ ಶಾಸಕರು, ಕಿರುಗಾವಲು.
3. ಶ್ರೀ ಹೆಚ್.ಬಿ.ರಾಮು, ಮಾನ್ಯ ಶಾಸಕರು, ಕೆರಗೋಡು.
4. ಶ್ರೀ ಸಿ.ಎಸ್. ಪುಟ್ಟರಾಜು, ಮಾನ್ಯ ಶಾಸಕರು, ಪಾಂಡವಪುರ.
5. ಶ್ರೀ ಹೆಚ್.ಎಸ್. ಶಂಕರಲಿಂಗೇಗೌಡ, ಮಾನ್ಯ ಶಾಸಕರು, ಚಾಮರಾಜಕ್ಷೇತ್ರ, ಮೈಸೂರು.
6. ಶ್ರೀ ಎಂ.ಕೆ.ಸೋಮಶೇಖರ್, ಮಾನ್ಯ ಶಾಸಕರು, ಕೃಷ್ಣರಾಜ ಕ್ಷೇತ್ರ, ಮೈಸೂರು.
7. ಶ್ರೀ ವಿಜಯಲಕ್ಷ್ಮೀ ಬಂಡಿಸಿದ್ದೇಗೌಡ, ಮಾನ್ಯ ಶಾಸಕರು, ಶ್ರೀರಂಗಪಟ್ಟಣ.
8. ಶ್ರೀ ಹೆಚ್. ಎನ್. ನಂಜೇಗೌಡ, ಮಾಜಿ ಛೇರ್ಮನ್ ಹೆಮ್ಮಿಗೆ.

**ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರುಗಳು :–**

1. ಸರ್ಕಾರದ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.
2. ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ, ಬೆಂಗಳೂರು.
3. ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಮೈಸೂರು.
4. ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಮಂಡ್ಯ.

**ವಿಶೇಷ ಆಹ್ವಾನಿತ ಸದಸ್ಯರುಗಳು:–**

1. ಶ್ರೀ ಸಿದ್ದರಾಮಯ್ಯ, ಮಾನ್ಯ ಉಪ ಮುಖ್ಯ ಮಂತ್ರಿಗಳು, ಕರ್ನಾಟಕ ಸರ್ಕಾರ.
2. ಶ್ರೀ ತನ್ವೀರ್ ಶೇಠ್, ಮಾನ್ಯ ಕಾರ್ಮಿಕ ಮತ್ತು ವಕ್ಫ್ ಸಚಿವರು.
3. ಶ್ರೀ ಸಿ.ಹೆಚ್. ವಿಜಯಶಂಕರ್, ಮಾನ್ಯ ಲೋಕಸಭಾ ಸದಸ್ಯರು, ಮೈಸೂರು.
4. ಶ್ರೀ ಅಂಬರೀಶ್, ಮಾನ್ಯ ಲೋಕಸಭಾ ಸದಸ್ಯರು, ಮಂಡ್ಯ.
5. ಶ್ರೀ ಎನ್. ಚಲುವರಾಯಸ್ವಾಮಿ, ಮಾನ್ಯ ಶಾಸಕರು, ನಾಗಮಂಗಲ.
6. ಶ್ರೀ ಡಿ.ಸಿ. ತಮ್ಮಣ್ಣ, ಮಾನ್ಯ ಶಾಸಕರು, ಮದ್ದೂರು.
7. ಶ್ರೀ ಕೆ. ಅನ್ನಧಾನಯ್ಯ, ಮಾನ್ಯ ಶಾಸಕರು, ಮಳವಳ್ಳಿ.
8. ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಮಂಡ್ಯ.
9. ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಮೈಸೂರು.
10. ಶ್ರೀ ಹೆಚ್. ಶ್ರೀನಿವಾಸ, ಅಡ್ವೋಕೇಟ್, ಮಂಡ್ಯ.
11. ಶ್ರೀ ಬಿ.ಚೌಡಯ್ಯ, ಮಾನ್ಯ ಉಪಾಧ್ಯಕ್ಷರು, ಕೌಡ್ಲೆ, ಮಂಡ್ಯ ತಾಲ್ಲೂಕು.
12. ಶ್ರೀ ವಿವೇಕನಂದಾ, ಜಿಲ್ಲಾ ಪಂಚಾಯತ್ ಸದಸ್ಯರು, ಮಂಡ್ಯ.
13. ಶ್ರೀ ಜಯರಾಮು ಬಿನ್ ಹೊನ್ನೇಗೌಡ, ದೊಡ್ಡೇಗೌಡನಹುಂಡಿ, ಮಳವಳ್ಳಿ.
14. ಶ್ರೀಮತಿ ಸುನಿತ ವೀರಪ್ಪಗೌಡ, ಬನ್ನೂರು.

2. ಅಧಿಕಾರೇತರ ಸದಸ್ಯರ ಮತ್ತು ವಿಶೇಷ ಆಹ್ವಾನಿತರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ 03.02.2001ರನ್ವಯ ನೀಡತಕ್ಕದ್ದು. ಈ ಬಗ್ಗೆ ತಗಲುವ ವೆಚ್ಚವನ್ನು ಕಾವೇರಿ ನೀರಾವರಿ ನಿಗಮದಡಿ ಭರಿಸತಕ್ಕದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 705

**ಎ.ಎಲ್. ಜಗದೀಶ್**

ವಿಶೇಷ ಕರ್ತವ್ಯಾಧಿಕಾರಿ(ತಾಂ.ಎಂಎಂಐ-3), ಜಲ ಸಂಪನ್ಮೂಲ ಇಲಾಖೆ

**ವಿಷಯ :** ತುಂಗಭದ್ರಾ ಜಲಾಶಯದ ಹಾಗೂ ವಿಜಯನಗರ ಕಾಲುವೆಗಳ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ನೀರಾವರಿ ಕೇಂದ್ರ ವಲಯ, ಮುನಿರಾಬಾದ್ ರವರ ಪತ್ರ ಸಂಖ್ಯೆ: ಮುಇಂ/ ನೀಕೇವ/ ತಾಸ-5 / ನೀಸಸ/ 2004-05 ದಿನಾಂಕ:15-06-2004.

ಮೇಲೆ ಓದಲಾದ ದಿನಾಂಕ:15-06-2004ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ನೀರಾವರಿ ಕೇಂದ್ರ ವಲಯ, ಮುನಿರಾಬಾದ್ ರವರು ತುಂಗಭದ್ರಾ ಜಲಾಶಯದ ಮತ್ತು ವಿಜಯನಗರ ಕಾಲುವೆಗಳ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

2. ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 119 ಎಂಟಿಪಿ 2004 ಬೆಂಗಳೂರು, ದಿನಾಂಕ: 24ನೇ ಜೂನ್ 2004**

ತುಂಗಭದ್ರಾ ಜಲಾಶಯ ಮತ್ತು ವಿಜಯನಗರ ಕಾಲುವೆಗಳ ಯೋಜನೆಗೆ ಈ ಕೆಳಕಂಡ ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರನ್ನೊಳಗೊಂಡ ನೀರಾವರಿ ಸಲಹಾ ಸಮಿತಿಯನ್ನು ಮುಂದಿನ ಆದೇಶ ಹೊರಡಿಸುವವರಿಗೂ ಪುನರ್ ರಚಿಸಲಾಗಿದೆ.

ಅಧ್ಯಕ್ಷರು, ಕಾಡಾ, ತುಂಗಭದ್ರಾ ಜಲಾಶಯ ಯೋಜನೆ, ಮುನಿರಾಬಾದ್. ಅಧ್ಯಕ್ಷರು

**ಅಧಿಕಾರಿ ಸದಸ್ಯರು:**

1) ಆಡಳಿತಾಧಿಕಾರಿಗಳು, ಕಾಡಾ, ತುಂಗಭದ್ರಾ ಜಲಾಶಯ ಯೋಜನೆ, ಮುನಿರಾಬಾದ್
2) ಮುಖ್ಯ ಇಂಜಿನಿಯರ್, ನೀರಾವರಿ ಕೇಂದ್ರ ವಲಯ, ಮುನಿರಾಬಾದ್.
3) ಅಧೀಕ್ಷಕ ಅಭಿಯಂತರರು, ತುಂಗಭದ್ರಾ ಯೋಜನಾ ವೃತ್ತ, ಮುನಿರಾಬಾದ್. ಸದಸ್ಯ ಕಾರ್ಯದರ್ಶಿ
4) ಅಧೀಕ್ಷಕ ಅಭಿಯಂತರರು, ತುಂಗಭದ್ರಾ ನಾಲಾ ನಿರ್ಮಾಣ ವೃತ್ತ, ಯರಮರಸ್
5) ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ
6) ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ, ರಾಯಚೂರು.
7) ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ, ಕೊಪ್ಪಳ

**ಅಧಿಕಾರೇತರ ಸದಸ್ಯರು:**

1) ಶ್ರೀ ಇಕ್ಬಾಲ್ ಅನ್ಸಾರಿ, ವಿಧಾನ ಸಭಾ ಸದಸ್ಯರು, ಗಂಗಾವತಿ
2) ಶ್ರೀ ಜಿ. ವೀರಪ್ಪ ದೇವಪ್ಪ ಕೆಸರಟ್ಟಿ, ವಿಧಾನ ಸಭಾ ಸದಸ್ಯರು, ಕನಕಗಿರಿ
3) ಶ್ರೀ ಹಂಪನಗೌಡ ಬಾದರ್ಲಿ, ವಿಧಾನ ಸಭಾ ಸದಸ್ಯರು, ಸಿಂಧನೂರು.
4) ಶ್ರೀ ಎನ್.ಎಸ್. ಬೋಸರಾಜು, ವಿಧಾನ ಸಭಾ ಸದಸ್ಯರು, ಮಾನ್ವಿ
5) ಶ್ರೀ ಎ. ಪಾಪಾರೆಡ್ಡಿ, ವಿಧಾನ ಸಭಾ ಸದಸ್ಯರು, ರಾಯಚೂರು
6) ಶ್ರೀ ಬಿ. ಶ್ರೀರಾಮಲು, ವಿಧಾನ ಸಭಾ ಸದಸ್ಯರು, ಬಳ್ಳಾರಿ
7) ಶ್ರೀ ಹೆಚ್.ಆರ್. ಗವಿಯಪ್ಪ, ವಿಧಾನ ಸಭಾ ಸದಸ್ಯರು, ಹೊಸಪೇಟೆ
8) ಶ್ರೀ ಎನ್. ಸೂರ್ಯನಾರಾಯಣ ರೆಡ್ಡಿ, ವಿಧಾನ ಸಭಾ ಸದಸ್ಯರು, ಕುರುಗೋಡು

**ವಿಶೇಷ ಆಹ್ವಾನಿತ ಅಧಿಕಾರಿಗಳು:**

1) ಸರ್ಕಾರದ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.
2) ಸರ್ಕಾರದ ಕಾರ್ಯದರ್ಶಿಗಳು, ಕಾನೂನು ಇಲಾಖೆ, ಬೆಂಗಳೂರು.
3) ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಳ್ಳಾರಿ.
4) ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ರಾಯಚೂರು.
5) ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಕೊಪ್ಪಳ.
6) ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಕೊಪ್ಪಳ.

**ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರುಗಳು:**

**ಶ್ರೀಯುತರಾದ:**

1) ಎಂ.ಪಿ. ಪ್ರಕಾಶ್, ಕಂದಾಯ ಹಾಗೂ ಸಂಸದೀಯ ಶಾಸಕಾಂಗ ವ್ಯವಹಾರಗಳು ಮತ್ತು ಮುಜರಾಯಿ ಸಚಿವರು
2) ಕೆ. ವಿರೂಪಾಕ್ಷಪ್ಪ ಲೋಕಸಭಾ ಸದಸ್ಯರು, ಕೊಪ್ಪಳ
3) ಎ. ವೆಂಕಟೇಶ ನಾಯ್ಕ, ಲೋಕಸಭಾ ಸದಸ್ಯರು, ರಾಯಚೂರು.
4) ಜಿ. ಕರುಣಾಕರ ರೆಡ್ಡಿ, ಲೋಕಸಭಾ ಸದಸ್ಯರು, ಬಳ್ಳಾರಿ.
5) ಎಂ.ಎಸ್. ಸೋಮಲಿಂಗಪ್ಪ ವಿಧಾನ ಸಭಾ ಸದಸ್ಯರು, ಸಿರುಗುಪ್ಪ
6) ಕೆ. ಬಸವರಾಜು ಭೀಮಪ್ಪ ಹಿಟ್ನಾಳ್, ವಿಧಾನ ಸಭಾ ಸದಸ್ಯರು, ಕೊಪ್ಪಳ
7) ಬಿ. ಮುನಿಯಪ್ಪ ಮುದ್ದಪ್ಪ ವಿಧಾನ ಸಭಾ ಸದಸ್ಯರು, ಕಲ್ಮಲಾ
8) ಹೆಚ್.ಆರ್. ಶ್ರೀನಾಥ್, ವಿಧಾನ ಪರಿಷತ್ ಸದಸ್ಯರು, ರಾಯಚೂರು
9) ಕರಿಯಣ್ಣ ಸಂಗಟಿ, ವಿಧಾನ ಪರಿಷತ್ ಸದಸ್ಯರು, ಕೊಪ್ಪಳ
10) ಕೆ.ಸಿ. ಕೊಂಡಯ್ಯ, ವಿಧಾನ ಪರಿಷತ್ ಸದಸ್ಯರು.
11) ಎಂ.ಆರ್. ತಂಗಾ, ವಿಧಾನ ಪರಿಷತ್ ಸದಸ್ಯರು.

ಅಧಿಕಾರೇತರ ಸದಸ್ಯರ ಮತ್ತು ವಿಶೇಷ ಆಹ್ವಾನಿತರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್.ಡಿ. 2 ಎಸ್ಆರ್ಎ 2000, ದಿನಾಂಕ: 03-02-2001 ರ ಅನ್ವಯ ಪಾವತಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಲ್. ಜಗದೀಶ್**

ವಿಶೇಷ ಕರ್ತವ್ಯಾಧಿಕಾರಿ (ಎಂಎಂಐ), ಜಲ ಸಂಪನ್ಮೂಲ ಇಲಾಖೆ.

ಪಿ.ಆರ್. 691